RNI No. **KARBIL/2001/47147**



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಜನವರಿ ೨೪, ೨೦೧೩ (ಮಾಘ ೪, ಶಕ ವರ್ಷ ೧೯೩೪)<br>Bangalore, Thursday, January 24, 2013 (Magha 4, Shaka Varsha 1934) | ಸಂಚಿಕೆ ೪<br>Issue 4 |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ರಾಯಚೂರು ಜಿಲ್ಲೆ, ಯಳಗುಂದಿ ಗ್ರಾಮದ. ಸ.ನಂ.11ರಲ್ಲಿ ಜಮೀನನ್ನು ಮೆ.ಕರೆ ಪವರ್ ರಿಸೋರ್ಸಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ 24.75 ಮೆಗಾವ್ಯಾಟ್ ಸಾಮರ್ಥ್ಯದ ಕಿರು ವಿದ್ಯುತ್ ಯೋಜನೆಗೆ ಭೂಮಿ ನೀಡುವ ಬಗ್ಗೆ

**ಓದಲಾಗಿದೆ:** ಪತ್ರಸಂಖ್ಯೆ:ಕಂ:ಭೂಮಿ:2011–12/5532,ದಿನಾಂಕ:9–1–2012 ಮತ್ತು ದಿನಾಂಕ:14–3–2012.

**ಪ್ರಸ್ತಾವನೆ:**

ಜಿಲ್ಲಾಧಿಕಾರಿ, ರಾಯಚೂರು ಇವರು ಮೇಲೆ ಓದಲಾದ ದಿನಾಂಕ:9–1–2012 ಮತ್ತು ದಿನಾಂಕ:14–3–2012ರ ಪತ್ರಗಳಲ್ಲಿ ರಾಯಚೂರು ಜಿಲ್ಲೆ., ಲಿಂಗಸುಗೂರು ತಾಲ್ಲೂಕಿನ ಯಳಗುಂದಿ ಗ್ರಾಮದ ಸರ್ಕಾರಿ ಜಮೀನು ಸ.ನಂ.11ರಲ್ಲಿ 320 ಎಕರೆ 33ಗುಂಟೆ ಪೈಕಿ 15 ಎಕರೆ 37 ಗುಂಟೆ ಜಮೀನನ್ನು ವಿದ್ಯುತ್ ಉತ್ಪಾದನಾ ಕಾಲುವೆಗಾಗಿ, 2 ಎಕರೆ 24 ಗುಂಟೆ ಜಮೀನನ್ನು ದಾಸ್ತಾನು (ಸಂಗ್ರಹಣಾ) ಕಟ್ಟಡಕ್ಕಾಗಿ, ಮತ್ತು ಯಳಗುಂದಿ ಗ್ರಾಮದ ಖರೀಜ್ ಖಾತಾ ಜಮೀನು ಸ.ನಂ.20ರಲ್ಲಿ ಒಟ್ಟು ವಿಸ್ತೀರ್ಣ 25ಎಕರೆ 03 ಗುಂಟೆ ಪೈಕಿ 15 ಗುಂಟೆ ವಿದ್ಯುತ್ ಉತ್ಪಾದನಾ ಕಾಲುವೆಗಾಗಿ ಹೀಗೆ ಒಟ್ಟು 18 ಎಕರೆ 36ಗುಂಟೆ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಮೆ.ಕರೆ ಪವರ್ ರಿಸೋರ್ಸಸ್ ಪ್ರೈ.ಲಿಮಿಟೆಡ್ ಇವರಿಗೆ 24.75 ಮೆಗಾವ್ಯಾಟ್ ಸಾಮರ್ಥ್ಯದ ಕಿರು ವಿದ್ಯುತ್ ಯೋಜನೆಗೆ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿದ್ದಾರೆ.

ಸದರಿ ಸಂಸ್ಥೆಯವರಿಗೆ 24.75 ಮೆಗಾವ್ಯಾಟ್ ಸಾಮರ್ಥ್ಯ ಕಿರು ವಿದ್ಯುತ್ ಯೋಜನೆಗೆ ಇಂಧನ ಇಲಾಖೆಯು ಆದೇಶ ಸಂಖ್ಯೆ:ಇಎನ್ 312 ಎನ್‌ಸಿಇ 2010, ದಿನಾಂಕ:22–9–2011ರಲ್ಲಿ ಅನುಮೋದನೆ ನೀಡಿರುತ್ತದೆ. ಉಪನೊಂದಣಾಧಿಕಾರಿ, ಲಿಂಗಸುಗೂರು ತಾಲ್ಲೂಕು ಮಾರುಕಟ್ಟೆ ಬೆಲೆ ನಿರ್ಧರಣ ಸಮಿತಿಯ ಮಾರ್ಗಸೂಚಿ ದರದ ಪ್ರಕಾರ ಖುಷ್ಕಿ ಜಮೀನಿಗೆ ಪ್ರತಿ ಎಕರೆಗೆ ರೂ.28,000–00 ಹಾಗೂ ನೀರಾವರಿ ಜಮೀನಿಗೆ ರೂ.50,000–00 ಇರುವುದಾಗಿ ಆ ಗ್ರಾಮದ ವ್ಯಾಪ್ತಿಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಯಾವುದೇ ಜಮೀನು ಮಾರಾಟ/ಪರಭಾರೆ ಆಗಿರುವುದಿಲ್ಲ ಎಂಬುದಾಗಿ ವರದಿ ಮಾಡಿರುವ ಹಿನ್ನೆಲೆಯಲ್ಲಿ ಮೆ.ಕರೆ ಪವರ್ ರಿಸೋರ್ಸಸ್ ಪ್ರೈ.ಲಿಮಿಟೆಡ್ ಇವರಿಗೆ 24.75 ಮೆಗಾವ್ಯಾಟ್ ಸಾಮರ್ಥ್ಯದ ಕಿರು ವಿದ್ಯುತ್ ಯೋಜನೆಗಾಗಿ ರಾಯಚೂರು ಜಿಲ್ಲೆ, ಲಿಂಗಸುಗೂರು ತಾಲ್ಲೂಕಿನ ಯಳಗುಂದಿ ಗ್ರಾಮದ ಸ.ನಂ.11ರಲ್ಲಿ 15.37 ಎಕರೆ ಸರ್ಕಾರಿ ಜಮೀನನ್ನು ವಿದ್ಯುತ್ ಉತ್ಪಾದನಾ ಕಾಲುವೆಗಾಗಿ ಮತ್ತು 2 ಎಕರೆ 24 ಗುಂಟೆ ಜಮೀನನ್ನು ದಾಸ್ತಾನು (ಸಂಗ್ರಹಣೆ) ಕಟ್ಟಡಕ್ಕಾಗಿ ಮತ್ತು ಸ.ನಂ.20ರಲ್ಲಿ 15ಗುಂಟೆ ಜಮೀನನ್ನು ವಿದ್ಯುತ್ ಉತ್ಪಾದನಾ ಕಾಲುವೆಗಾಗಿ ಹೀಗೆ ಒಟ್ಟು 18 ಎಕರೆ 36 ಗುಂಟೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 48 ಎಲ್‌ಜಿಆರ್ 2011 ಬೆಂಗಳೂರು, ದಿನಾಂಕ:17.10.2012**

ರಾಯಚೂರು ಜಿಲ್ಲೆ, ಲಿಂಗಸುಗೂರು ತಾಲ್ಲೂಕಿನ ಯಳಗುಂದಿ ಗ್ರಾಮದ ಸ.ನಂ.11ರಲ್ಲಿ 15.37 ಎಕರೆ ಸರ್ಕಾರಿ ಜಮೀನನ್ನು ವಿದ್ಯುತ್ ಉತ್ಪಾದನಾ ಕಾಲುವೆಗಾಗಿ ಮತ್ತು 2 ಎಕರೆ 24 ಗುಂಟೆ ಜಮೀನನ್ನು ದಾಸ್ತಾನು (ಸಂಗ್ರಹಣೆ) ಕಟ್ಟಡಕ್ಕಾಗಿ ಮತ್ತು ಸ.ನಂ.20ರಲ್ಲಿ 0.15 ಎಕರೆ/ಗುಂಟೆ ಜಮೀನನ್ನು ವಿದ್ಯುತ್ ಉತ್ಪಾದನಾ ಕಾಲುವೆಗಾಗಿ ಹೀಗೆ ಒಟ್ಟು 18.36 ಎಕರೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969) ನಿಯಮ 19(ಎ)(3) ರನ್ವಯ ಇತ್ತೀಚಿನ ಮಾರುಕಟ್ಟೆ ದರದ ಶೇ.10 ರಷ್ಟು ದರ ವಿಧಿಸಿ ಪ್ರತಿ ಎರಡು ವರ್ಷಗಳಿಗೊಮ್ಮೆ ಶೇ. 10ರಷ್ಟು ದರ ಹೆಚ್ಚಿಸುವ ಷರತ್ತಿಗೆ ಒಳಪಟ್ಟು ಮೆ.ಕರೆ

ಪವರ್ ರಿಸೋರ್ಸಸ್ ಪ್ರೈ.ಲಿಮಿಟೆಡ್, ಬೆಂಗಳೂರು ಇವರಿಗೆ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ನೀಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ:ಆಇ:383:ವೆಚ್ಚ–7:2012, ದಿನಾಂಕ:20–6–2012ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಜಿ.ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3)

**P.R. 2190**

## ಕಂದಾಯ ಸಚಿವಾಲಯ

**ವಿಷಯ:** ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕು ಐಹೊಳೆ ಐತಿಹಾಸಿಕ ಸ್ಮಾರಕಗಳ ಸುತ್ತಲೂ ಇರುವ ಕಟ್ಟಡಗಳನ್ನು ಸಂಪೂರ್ಣವಾಗಿ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:–** 1) ಮಹಾ ವ್ಯವಸ್ಥಾಪಕರು, ಭೂಸ್ವಾಧೀನ, ಕೃಮೇಯೋ, ನವನಗರ, ಬಾಗಲಕೋಟೆ ಇವರ ಪತ್ರ ಸಂಖ್ಯೆ: ಮವ್ಯ/ಪುಪು/ಸ್ಮಾರಕ/ ಸಿಆರ್–2/2006–07/2274, ದಿನಾಂಕ: 03.09.2010,

2) ಮಹಾ ವ್ಯವಸ್ಥಾಪಕರು, ಪು ಮತ್ತು ಪು, ಕೃಮೇಯೋ, ನವನಗರ, ಬಾಗಲಕೋಟೆ ಇವರ ಪತ್ರ ಸಂಖ್ಯೆ ಮವ್ಯ/ಪುಪು/ಸ್ಮಾರಕ/ ಸಿಆರ್–2/2006–07/302, ದಿನಾಂಕ: 28.04.2011 ಮತ್ತು ಮವ್ಯ/ಪುಪು/ಸ್ಮಾರಕ/ಸಿಆರ್–2/2006–07/3933 ದಿನಾಂಕ: 11.01.2012

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ, ಹುನಗುಂದ ತಾಲ್ಲೂಕು, ಐಹೊಳೆ ಗ್ರಾಮವು ಐತಿಹಾಸಿಕ ಹಾಗೂ ಜಗತ್ಪ್ರಸಿದ್ಧ ವಿಶ್ವಪರಂಪರೆಯ ಸ್ಮಾರಕಗಳನ್ನು ಹೊಂದಿರುವ ಪುರಾತನ ಗ್ರಾಮವಾಗಿರುತ್ತದೆ. ಇಲ್ಲಿ ವಿಶ್ವಪರಂಪರೆಯ ಸ್ಮಾರಕ ಪಟ್ಟದಕಲ್ಲು ದೇವಾಲಯ ಹಾಗೂ ಇತರೆ ಐತಿಹಾಸಿಕ ಪ್ರಸಿದ್ಧ ಸ್ಮಾರಕಗಳು ಹಾಗೂ ದೇವಾಲಯಗಳು ಇರುತ್ತವೆ. ಐಹೊಳೆ ಗ್ರಾಮವು ಒಂದು ಪ್ರಮುಖ ಪ್ರವಾಸಿ ಕೇಂದ್ರವಾಗಿದೆ. ಇಲ್ಲಿನ ದೇವಾಲಯಗಳು ಹಾಗೂ ಸ್ಮಾರಕಗಳು ಭಾರತ ಸರ್ಕಾರದ ಪುರಾತತ್ವ ಸ್ಮಾರಕ ಕಾಯ್ದೆ 1958 ಮತ್ತು ಶಾಸನ 1959ರನ್ವಯ ಸಂರಕ್ಷಿತ ಪ್ರದೇಶವಾಗಿರುತ್ತದೆ.

ಐಹೊಳೆ ಗ್ರಾಮದಲ್ಲಿ ಸ್ಮಾರಕಗಳ ಸಂರಕ್ಷಣೆ ಪೂರ್ಣ ಪ್ರಮಾಣದಲ್ಲಿ ಆಗಿರುವುದಿಲ್ಲ. ಈ ಗ್ರಾಮವು ಕೃಷಿ ಪ್ರಧಾನ ಗ್ರಾಮವಾಗಿದ್ದು, ಗ್ರಾಮದ ಹಲವಾರು ಮನೆಗಳು ಮತ್ತು ಕಟ್ಟಡಗಳು ಇತಿಹಾಸ ಪ್ರಸಿದ್ಧ ದೇವಾಲಯಗಳು ಹಾಗೂ ಸ್ಮಾರಕಗಳಿಗೆ ಹೊಂದಿಕೊಡಂತೆ ಇರುತ್ತವೆ ಇಲ್ಲಿನ ಗ್ರಾಮಸ್ಥರು ಈ ದೇವಾಲಯಗಳ ಮತ್ತು ಸ್ಮಾರಕಗಳ ಆವರಣಗಳನ್ನು ವಿಶ್ರಾಂತಿಗಾಗಿ, ಸಾಮಗ್ರಿಗಳನ್ನಿಡಲು, ಜಾನುವಾರುಗಳ ಸಾಗಾಣಿಕೆಗೆ ಗಾಡಿ, ಟ್ರ್ಯಾಕ್ಟರ್‌ಗಳನ್ನು ಇಡಲು ಬಳಸಿಕೊಳ್ಳುತ್ತಿದ್ದು, ಈಗಲೂ ಅದು ಮುಂದುವರಿದಿದೆ. ಭಾರತ ಸರ್ಕಾರ ಕಾಯ್ದೆ ಪ್ರಕಾರ ಸಂರಕ್ಷಿತ ಸ್ಮಾರಕದ 100ಮೀ. ಅಂತರದಲ್ಲಿ ಯಾವುದೇ ಕಾಮಗಾರಿ ನಡೆಸಲು ಅವಕಾಶವಿರುವುದಿಲ್ಲ. ಸ್ಮಾರಕಗಳನ್ನು ಹಾಳುಮಾಡುವಂತಿಲ್ಲ. ಸ್ಮಾರಕದ ಹೊರಭಾಗದ 200ಮೀ. ಅಂತರದಲ್ಲಿ ಭಾರತೀಯ ಪುರಾತತ್ವ ಇಲಾಖೆಯ ಅನುಮತಿ ಇಲ್ಲದೆ ಮನೆಗಳನ್ನು ಕಟ್ಟುವುದು, ಕಟ್ಟಿದ ಗೋಡೆ ಬೀಳಿಸುವುದು ಇತ್ಯಾದಿ ಮಾಡುವಂತಿಲ್ಲ.

ಐಹೊಳೆ ಗ್ರಾಮದ ತುಂಬಾ ಅಪೂರ್ವ ಶಿಲ್ಪಕಲೆಯ ಹೊರತು ದೇವಾಲಯಗಳೂ, ಸ್ಮಾರಕಗಳು ಇರುತ್ತವೆ. ಈ ಐತಿಹಾಸಿಕ ಸ್ಥಳ ವೀಕ್ಷಣೆಗೆ ಬರುವ ಬಹಳಷ್ಟು ವಿದೇಶಿ ಪ್ರವಾಸಿಗರು ಹಾಗೂ ಸ್ಥಳೀಯ ಪ್ರವಾಸಿಗರಿಗೆ ಇಲ್ಲಿನ ವಾತಾವರಣ ನೋಡಿ ಮುಜುಗರ ಉಂಟಾಗುವ ಸನ್ನಿವೇಶ ಇರುತ್ತದೆ. ಇದರಿಂದ ಪ್ರವಾಸೋದ್ಯಮದ ಬೆಳವಣಿಗೆ ಕುಂಠಿತವಾಗಿದೆ ಹಾಗೂ ಗ್ರಾಮದ ಸರ್ವಾಂಗೀಣ ಅಭಿವೃದ್ದಿಯಾಗದೆ ಗ್ರಾಮಸ್ಥರು ಜೀವನ ನಡೆಸಲು ಮೂಲ ಸೌಲಭ್ಯಗಳ ಕೊರತೆಯಿಂದಾಗಿ ಅನಾನುಕೂಲವಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಪ್ರವಾಸೋದ್ಯಮ ಹಾಗೂ ಐಹೊಳೆ ಗ್ರಾಮದ ಅಭಿವೃದ್ದಿ ದೃಷ್ಟಿಯಿಂದ ಗ್ರಾಮ ಸ್ಥಳಾಂತರವೇ ಸೂಕ್ತ ಪರಿಹಾರ ಎಂದು ಅಭಿಪ್ರಾಯ ಪಡಲಾಗಿದೆ. ಈ ಸಂಬಂದದಲ್ಲಿ ಹಿಂದಿನ ಮಾನ್ಯ ಕಂದಾಯ ಸಚಿವರು ಮತ್ತು ಪ್ರವಾಸೋದ್ಯಮ ಸಚಿವರು ದಿನಾಂಕ: 22.11.2006ರಂದು ಐಹೊಳೆ ಗ್ರಾಮ ಸ್ಥಳಾಂತರ ಕುರಿತು ಚರ್ಚಿಸಲು ಸಭೆ ನಡೆಸಿರುತ್ತಾರೆ. ಈ ಸಭೆಗೆ ಬಾಗಲಕೋಟೆ ಜಿಲ್ಲೆಯ ಲೋಕಸಭಾ ಸದಸ್ಯರು, ಶಾಸಕರು ಹಾಜರಿದ್ದರು. ಈ ಸಭೆಯಲ್ಲಿ ಐಹೊಳೆ ಗ್ರಾಮ ಸ್ಥಳಾಂತರಕ್ಕೆ ಸ್ಥಳ ತನಿಖೆ ಕೈಗೊಂಡು ಸಮೀಕ್ಷೆ ನಡೆಸಿ, ಪ್ರಸ್ತಾವನೆ ಸಲ್ಲಿಸಲು ಜಿಲ್ಲಾಧಿಕಾರಿ, ಬಾಗಲಕೋಟೆ ಜಿಲ್ಲೆ ಇವರಿಗೆ ಸೂಚಿಸಲಾಗಿತ್ತು.

ಮೇಲೆ ಓದಲಾದ ಉಲ್ಲೇಖ (1) ದಿನಾಂಕ: 03.09.2010ರ ಪತ್ರದಲ್ಲಿ ಮಹಾ ವ್ಯವಸ್ಥಾಪಕರು, ಕೃಷ್ಣಾ ಮೇಲ್ದಂಡೆ ಯೋಜನೆ ಬಾಗಲಕೋಟೆ ಇವರು ಐಹೊಳೆ ಗ್ರಾಮದಲ್ಲಿ ಐತಿಹಾಸಿಕ ಸ್ಮಾರಕಗಳ ಸುತ್ತ ಇರುವ 114 ಕಟ್ಟಡಗಳನ್ನು ಮಾತ್ರ ಸ್ವಾಧೀನಪಡಿಸಿಕೊಂಡು ಸ್ಥಳಾಂತರಿಸಲು ಭಾರತೀಯ ಪುರಾತತ್ವ ಇಲಾಖೆಯೊಂದಿಗೆ ಸಮಾಲೋಚಿಸಿ ಪ್ರಸ್ತಾವನೆ ಸಲ್ಲಿಸಿದ್ದರು. ಇದಕ್ಕೆ ಅಂದಾಜು ರೂ. 30.00ಕೋಟಿಗಳ ವೆಚ್ಚ ತಗಲುವುದಾಗಿ ಇದರಲ್ಲಿ ಶೇಕಡ 50ರಷ್ಟು ಅಂದರೆ ರೂ. 15.00ಕೋಟಿಗಳನ್ನು ಭಾರತೀಯ ಪುರಾತತ್ವ ಇಲಾಖೆಯು ಭರಿಸುವಂತೆ ಉಳಿದ ಮೊತ್ತ ರೂ. 15.00ಕೋಟಿಯನ್ನು ರಾಜ್ಯ ಸರ್ಕಾರ ಭರಿಸುವಂತೆ ಮೇಲೆ ಓದಲಾದ ಉಲ್ಲೇಖ (2)ರ ದಿನಾಂಕ: 11.01.2012ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್ ನಿರ್ಮಾಣ, ಬಾಗಲಕೋಟೆ ರವರು ಕೋರಿದ್ದರು. ಈ ಸಂಬಂಧ The Director General, Archaeological Survey of India, £À ªÀAzÉ ºÀ° EªÀjUÉ Archaeological Survey of India, ಧಾರವಾಡ ರವರು ದಿನಾಂಕ: 06.08.2010ರಂದು ಪ್ರಸ್ತಾವನೆ ಕಳುಹಿಸಿ ಐಹೊಳೆ ಗ್ರಾಮದಲ್ಲಿನ ಸ್ಮಾರಕಗಳ ಸುತ್ತ ಇರುವ 114 ಕಟ್ಟಡಗಳನ್ನು ಸ್ಥಳಾಂತರಿಸಲು ತಗಲುವ ವೆಚ್ಚ ರೂ. 30.00ಕೋಟಿಗಳಲ್ಲಿ ಶೇಕಡ 50ರಷ್ಟುನ್ನು ಭರಿಸಿ ಭಾರತ ಸರ್ಕಾರದ ಅನುಮತಿಯನ್ನು ಪಡೆದು ಕಳುಹಿಸುವಂತೆ ಕೋರಲಾಗಿತ್ತು. ಈ ಬಗ್ಗೆ ಅವರಿಂದ ಯಾವುದೇ ನಿರ್ದಿಷ್ಟ ಸಹಮತಿ ಬಂದಿರುವುದಿಲ್ಲ.

ಆದರೆ ಗ್ರಾಮಸ್ಥರು ಗ್ರಾಮದಲ್ಲಿನ ಮನೆಗಳನ್ನು ಭಾಗಶ: ಸ್ಥಳಾಂತರಿಸುವ ಬದಲಾಗಿ ಪೂರ್ಣ ಗ್ರಾಮವನ್ನೆ ಸ್ಥಳಾಂತರಿಸಿ ಪುನರ್ವಸತಿ ಕಲ್ಪಿಸಬೇಕೆಂದು ಒತ್ತಾಯಿಸಿದ್ದರಿಂದ ಹಾಗೂ ಹಿಂದಿನ ಕಂದಾಯ ಸಚಿವರು ಹಾಗೂ ಸ್ಥಳೀಯ ಶಾಸಕರು ಸಹ ಪೂರ್ಣ ಗ್ರಾಮವನ್ನೆ ಸ್ಥಳಾಂತರಿಸುವಂತೆ

ತಿಳಿಸಿದ್ದರಿಂದ, ಮೇಲೆ ಓದಲಾದ ಉಲ್ಲೇಖ (2)ರ ಪತ್ರದಲ್ಲಿ ಮಹಾ ವ್ಯವಸ್ಥಾಪಕರು, ಕೃಷ್ಣಾ ಮೇಲ್ದಂಡೆ ಯೋಜನೆ, ಬಾಗಲಕೋಟೆ ಇವರು ಐಹೊಳೆ ಗ್ರಾಮವನ್ನು ಪೂರ್ಣಾವಾಗಿ ಸ್ಥಳಾಂತರಿಸಲು ಪ್ರಸ್ತಾವನೆಯನ್ನು ಸಲ್ಲಿಸಿ, ಐಹೊಳೆ ಗ್ರಾಮದಲ್ಲಿ ಈಗ 942 ಕುಟುಂಬಗಳಿದ್ದು ಇವುಗಳನ್ನು ಸಂಪೂರ್ಣವಾಗಿ ಸ್ಥಳಾಂತರಿಸಲು ಪುನರ್ವಸತಿ ಕೇಂದ್ರಕ್ಕೆ ಬೇಕಾಗುವ ಜಮೀನು, ಪುನರ್ವಸತಿ ಕೇಂದ್ರದಲ್ಲಿ ಮೂಲಭೂತ ಸೌಲಭ್ಯಗಳು ಹಾಗೂ ಹಳೆಯ ಗ್ರಾಮದಲ್ಲಿ ಸಂತ್ರಸ್ಥ ಕುಟುಂಬಗಳ ಕಟ್ಟಡಗಳು ಮತ್ತು ನಿವೇಶನಗಳನ್ನು ಸ್ವಾಧೀನಪಡಿಸಬೇಕಿರುತ್ತದೆ.

ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕು ಐಹೊಳೆ ಗ್ರಾಮದಲ್ಲಿ ಒಟ್ಟು 942 ಕುಟುಂಬಗಳಿದ್ದು, ಇವುಗಳನ್ನು ಸಂಪೂರ್ಣವಾಗಿ ಸ್ಥಳಾಂತರಿಸಲು ಈ ಕೆಳಕಂಡ ಅಂದಾಜು ವೆಚ್ಚ ತಗಲುತ್ತದೆ.

**(ರೂ. ಲಕ್ಷಗಳಲ್ಲಿ)**

| ಕ್ರ ಸಂ | ವಿವರ | ವೆಚ್ಚ |
|---|---|---|
| 1 | **ಪುನರ್ವಸತಿ ಕೇಂದ್ರಕ್ಕಾಗಿ ಅಗತ್ಯ ಜಮೀನು ಖರೀದಿ – 282 ಎಕರೆ**<br>ಅ) 942 ಮನೆಗಳಿಗೆ ನಿವೇಶನ ಪ್ರತಿ ಮನೆಗೆ 600 ಚ.ಮೀ (ಮುಖ್ಯ ಸಂತ್ರಸ್ಥರ ವಯಸ್ಕ ಮಕ್ಕಳು ಹಾಗೂ ಸಹೋದರರು)<br>942*6 ಗುಂಟೆ = 5652 ಗುಂಟೆ=141ಎಕರೆ<br>ಆ) ಮೂಲಭೂತ ಸೌಕರ್ಯಗಳಿಗೆ ಅಗತ್ಯವಾದ ಜಮೀನು 141 ಎಕರೆ<br>ಇ) ಪ್ರತಿ ಎಕರೆಗೆ ಹಿಂದಿನ ದರ ರೂ. 2,23000.00ದಂತೆ ತಗಲುವ ವೆಚ್ಚ | 629.00 |
| 2 | ಪುನರ್ವಸತಿ ಕೇಂದ್ರದಲ್ಲಿ ಸಂತ್ರಸ್ಥ ಕುಟುಂಬಗಳಿಗೆ ಕಟ್ಟಡ ನಿರ್ಮಾಣ ವೆಚ್ಚ ಪರಿಹಾರ ಧನ (ಮುಖ್ಯ ಸಂತ್ರಸ್ಥ ವಯಸ್ಕ ಮಕ್ಕಳು ಸಹೋದರರು)<br>942*3=2826*25000=7,06,50,000 | 707.00 |
| 3 | ಸಂತ್ರಸ್ಥ ಕುಟುಂಬಗಳು ಪುನರ್ವಸತಿ ಕೇಂದ್ರಕ್ಕೆ ಸ್ಥಳಾಂತರಗೊಳ್ಳುಲು ಸಾಗಾಣಿಕೆ ವೆಚ್ಚ<br>(ಪ್ರತಿ ಕುಟುಂಬಕ್ಕೆ ರೂ. 500 ರಂತೆ<br>942*500=4,71,000) | 5.00 |
| 4 | ಪುನರ್ವಸತಿ ಕೇಂದ್ರದಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು (ರಸ್ತೆ, ನೀರು ಸರಬರಾಜು, ವಿದ್ಯುತ್ ಸೌಲಭ್ಯ, ಸಮುದಾಯ ಭವನ, ಶಾಲಾ ಕಟ್ಟಡ, ಅಂಗನವಾಡಿ, ಪ್ರಾರ್ಥನಾ ಮಂದಿರ ಇತ್ಯಾದಿ) | 874.00 |
| 5 | ಐಹೊಳೆ ಗ್ರಾಮದಲ್ಲಿ 942 ಹಳೆಯ ಕಟ್ಟಡಗಳನ್ನು ಭೂಸ್ವಾಧೀನಪಡಿಸಲು ಬೇಕಾಗಿರುವ ಮೊತ್ತ. | 2826.00 |
| | **ಒಟ್ಟು ರೂ.** | **5041.00** |

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಸರ್ಕಾರವು ಆದೇಶಿಸಿದೆ:–

**ಸರ್ಕಾರಿ ಆದೇಶ ಸಂಖ್ಯೆ. ಕಂಇ 49 ಆರ್‌ಇಹೆಚ್ 2012, ಬೆಂಗಳೂರು, ದಿನಾಂಕ : 31/08/2012.**

"ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕು ಐಹೊಳೆ ಗ್ರಾಮವು ಐತಿಹಾಸಿಕ ಹಾಗೂ ಜಗತ್ಪ್ರಸಿದ್ಧ ವಿಶ್ವ ಪರಂಪರೆಯ ಸ್ಮಾರಕಗಳು, ದೇವಾಲಯಗಳು ಹಾಗೂ ಅಪೂರ್ವ ಶಿಲ್ಪ ಕಲೆ ಹೊಂದಿರುವ ಪುರಾತನ ಗ್ರಾಮವಾಗಿದ್ದು, ಸ್ಮಾರಕಗಳ ಸಂಪೂರ್ಣ ಸಂರಕ್ಷಣೆ ಮಾಡುವ ಉದ್ದೇಶದಿಂದ ಐಹೊಳೆ ಐತಿಹಾಸಿಕ ಸ್ಮಾರಕಗಳ ಸುತ್ತಲೂ ಇರುವ ಕಟ್ಟಡಗಳನ್ನು ಸಂಪೂರ್ಣವಾಗಿ ಸ್ಥಳಾಂತರಿಸಿ ಪುನರ್ವಸತಿ ಕಲ್ಪಿಸಲು ರೂ. 5041.00ಲಕ್ಷಗಳ ಪುನರ್ವಸತಿ ಪ್ಯಾಕೇಜ್‌ಗೆ ಸರ್ಕಾರ ಮಂಜೂರಾತಿ ನೀಡಿದೆ.

ಈ ಸಂಬಂಧದ ವೆಚ್ಚವನ್ನು ಭರಿಸುವ ಲೆಕ್ಕ ಶೀರ್ಷಿಕೆ ಹಾಗೂ ಅನುದಾನದ ವಿವರಗಳ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: 530 ವೆಚ್ಚ–7 ದಿನಾಂಕ: 28/30–07–2012 ಮತ್ತು ಯೋಜನಾಇಲಾಖೆಯ ಟಿಪ್ಪಣಿ ಸಂಖ್ಯೆ: 28 ಪಿ.ಎಫ್.ಒ 2012 ದಿನಾಂಕ: 18/08/2012ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಲಲಿತಾ ಹೆಚ್. ಹಂದಿಗೋಳ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಪುನರ್ವಸತಿ)

**P.R. 2210**

## ಕಂದಾಯ ಸಚಿವಾಲಯ

**ವಿಷಯ:** ಬುದ್ದ ಎಜುಕೇಷನ್ ಟ್ರಸ್ಟ್ ಇವರಿಗೆ ಭೂಮಿ ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 233 ಎಲ್‌ಜಿಬಿ 2001 ದಿನಾಂಕ:21.03.2002

2. ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 233 ಎಲ್‌ಜಿಬಿ 2001 ದಿನಾಂಕ:23.06.2009

3. ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 522 ಎಲ್‌ಜಿಬಿ 2011 ದಿನಾಂಕ:23.06.2012

4. ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಇವರ ಪತ್ರಸಂಖ್ಯೆ:ಎಲ್‌ಎನ್‌ಡಿ(ಎನ್)ಸಿಆರ್/94/ 2012–13 ದಿನಾಂಕ:09.10.2012

ಪ್ರಸ್ತಾವನೆ:

ಮೇಲೆ ಓದಲಾದ (1)ರ ಆದೇಶದಲ್ಲಿ ಬುದ್ಧ ಎಜುಕೇಷನ್ ಸೊಸೈಟಿ ಮತ್ತು ಟ್ರಸ್ಟ್ (ರಿ) ಈ ಸಂಸ್ಥೆಗೆ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಗಿಡದಕೋನೇನಹಳ್ಳಿ ಗ್ರಾಮದ ಸರ್ವೆ ನಂ.38 ರಲ್ಲಿ 6.00 ಎಕರೆ ಜಮೀನನ್ನು ಎಕರೆ ಒಂದಕ್ಕೆ 2.00 ಲಕ್ಷಗಳ ಮಾರುಕಟ್ಟೆ ಬೆಲೆಗೆ ಹಾಗೂ ನಿಯಮಗಳನ್ವಯ ಶುಲ್ಕಗಳನ್ನು ವಿಧಿಸಿ ಮಂಜೂರು ಮಾಡಲಾಗಿತ್ತು.

2. ಈ ಸಂಬಂಧ ಶ್ರೀಮತಿ ಮಾದಮ್ಮ ಮತ್ತು 24 ಇತರರು, ಶ್ರೀ ರಂಗಸ್ವಾಮಿ ಮತ್ತು 24 ಇತರರು ಹಾಗೂ ಶ್ರೀ ಮಾದಯ್ಯ ಮತ್ತು ಇತರರು ಕ್ರಮವಾಗಿ ರಿಟ್ ಅರ್ಜಿ ಸಂ:7756/2006, ರಿಟ್ ಅರ್ಜಿ ಸಂಖ್ಯೆ:7271/2006 ಹಾಗೂ ರಿಟ್ ಅರ್ಜಿ ಸಂಖ್ಯೆ:9317/2006 ಮತ್ತು 2381/2006ಗಳನ್ನು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ. ಈ ರಿಟ್ ಅರ್ಜಿಗಳನ್ನು ಮಾನ್ಯ ಉಚ್ಚ ನ್ಯಾಯಾಲಯವು ಒಟ್ಟುಗೂಡಿಸಿ ದಿನಾಂಕ:30–05–2008ರ ತೀರ್ಪಿನಲ್ಲಿ ರಿಟ್ ಅರ್ಜಿಗಳನ್ನು ವಜಾಮಾಡಿ ಸರ್ಕಾರವು ಬುದ್ಧ ಎಜುಕೇಷನ್ ಸೊಸೈಟಿ ಮತ್ತು ಟ್ರಸ್ಟ್(ರಿ) ಈ ಸಂಸ್ಥೆಗೆ ಗಿಡದಕೋನೇನಹಳ್ಳಿ ಗ್ರಾಮದ ಸರ್ವೆ ನಂ.38 ರಲ್ಲಿ 6 ಎಕರೆ ಜಮೀನನ್ನು ಮಂಜೂರು ಮಾಡಿರುವುದನ್ನು ಎತ್ತಿ ಹಿಡಿದು ಆದೇಶಿಸಿತ್ತು.

3. ರಾಜ್ಯದ ಉಚ್ಚ ನ್ಯಾಯಾಲಯದ ಆದೇಶದಿಂದ ಭಾದಿತರಾದ ಶ್ರೀಮತಿ ಮಾದಮ್ಮ ಬಿನ್ ಲೇಟ್ ವೆಂಕಟರಮಣಪ್ಪ ಮತ್ತು 24 ಇತರರು ಅರ್ಜಿದಾರರು ರಾಜ್ಯ ಸರ್ಕಾರ ವಿರುದ್ಧ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅಪೀಲು ಸಂಖ್ಯೆ: 997/2008 (ಎಲ್.ಎ.ಬಿ.ಡಿ.ಎ) ರಿಟ್ ಅಪೀಲು ಸಂಖ್ಯೆ: 1022/2008 (ಎಲ್.ಎ.ಬಿ.ಡಿ.ಎ) ಹಾಗೂ ರಿಟ್ ಅಪೀಲು ಸಂಖ್ಯೆ: 1023/2008 (ಎಲ್.ಎ.ಬಿ.ಡಿ.ಎ) ಗಳನ್ನು ದಾಖಲಿಸಿದ್ದರು.

4. ರಾಜ್ಯದ ಉಚ್ಚ ನ್ಯಾಯಾಲಯವು ಸದರಿ ರಿಟ್ ಮೇಲ್ಮನವಿ ಅರ್ಜಿಗಳನ್ನು ಇತ್ಯರ್ಥಗೊಳಿಸುತ್ತಾ, ದಿನಾಂಕ:17–10–2008 ರಂದು ಕೆಳಕಂಡಂತೆ ತೀರ್ಪು ನೀಡಿರುತ್ತದೆ:–

"(30) issue No.III, to what reliefs the parties are entitled to:

(i) In view of the answers to issue Nos.1 and 2 the petitioners are entitled for the respective sites unless and until their possession is resumed by the Government in accordance with the procedure and in the manner known to law.

(ii) The two educational institutions viz., Buddha Education Trust and Basaveshwara Little Flowers Educational Society, have been granted 6-00 acres and 4-00 acres respectively in their favour, even though not entitled for the reasons aforesaid are entitled for alternative land to be allotted by the Government with in a period of three months from the date of receipt of this order without claiming any extra amount.

5. ಮಾನ್ಯ ಉಚ್ಚನ್ಯಾಯಾಲಯದ ಆದೇಶದ ಅನ್ವಯ ಬುದ್ಧ ಎಜುಕೇಷನ್ ಸೊಸೈಟಿ & ಟ್ರಸ್ಟ್(ರಿ), ಇವರಿಗೆ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ ಗಿಡದಕೋನೇನಹಳ್ಳಿ ಗ್ರಾಮದ ಸರ್ವೆ ನಂ. 38ರಲ್ಲಿ 6.00 ಎಕರೆ ಜಮೀನನ್ನು ಎಕರೆ ಒಂದಕ್ಕೆ '2.00 ಲಕ್ಷಗಳ ಮೊತ್ತದ ಮಾರುಕಟ್ಟೆ ಬೆಲೆ ವಿಧಿಸಿ ಸರ್ಕಾರದ ಪತ್ರ ಸಂಖ್ಯೆ:ಆರ್‌ಡಿ 233 ಎಲ್‌ಜಿಬಿ 2001 ದಿನಾಂಕ:21–03–2002 ಮತ್ತು 16–07–2002ರಲ್ಲಿ ನೀಡಲಾದ ಮಂಜೂರಾತಿ ರದ್ದುಪಡಿಸಿ, ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಅವ್ವೇರಹಳ್ಳಿ ಸರ್ವೆ ನಂ.10 ರಲ್ಲಿ 6.00 ಎಕರೆ ಜಮೀನನ್ನು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಮಂಜೂರು ಮಾಡಲಾಗಿತ್ತು.

6. ನಂತರ, ಬುದ್ಧ ಎಜುಕೇಷನ್ ಸೊಸೈಟಿ ಮತ್ತು ಟ್ರಸ್ಟ್ (ರಿ) ಇವರು ಹಲವಾರು ಮನವಿಗಳನ್ನು ಸಲ್ಲಿಸುತ್ತಾ, ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿಯ ಅವ್ವೇರಹಳ್ಳಿ ಗ್ರಾಮ ಸ.ನಂ.10ರಲ್ಲಿ ಮಂಜೂರು ಮಾಡಿರುವ ಜಮೀನು ಬೆಟ್ಟ ಮತ್ತು ಗುಡ್ಡಗಳಿಂದ ಅವೃತ್ತವಾಗಿದ್ದು, ಶೈಕ್ಷಣಿಕ ಉದ್ದೇಶಕ್ಕೆ ಯೋಗ್ಯವಾಗಿಲ್ಲವಾದ್ದರಿಂದ ಗಿಡದಕೋನೇನಹಳ್ಳಿಯ ಸರ್ವೆ ನಂ. 38ರಲ್ಲಿ ಖಾಲಿ ಇರುವ ಭೂಮಿಯನ್ನು ಮಂಜೂರು ಮಾಡಲು ವಿನಂತಿಸಿರುತ್ತಾರೆ.

7. ಈ ಸಂಬಂಧ, ಬುದ್ಧ ಎಜುಕೇಷನ್ ಸೊಸೈಟಿ ಮತ್ತು ಟ್ರಸ್ಟ್ (ರಿ)ರ ಆಡಳಿತ ಮಂಡಳಿಯವರು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:22505/2009ನ್ನು ಸಲ್ಲಿಸಿದ್ದು, ಅವರ ಸಂಸ್ಥೆಗೆ ಪರ್ಯಾಯವಾಗಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಗಿಡದಕೋನೇನಹಳ್ಳಿ ಗ್ರಾಮದ ಸರ್ವೆ ನಂ.38 ರಲ್ಲಿನ 6.00 ಎಕರೆ ಜಮೀನಿನ ಮಂಜೂರಾತಿ ರದ್ದುಪಡಿಸಿ ಪುನ: ಪರಿಗಣಿಸಿ ಅದೇ ಜಮೀನನ್ನು ಮರು ಮಂಜೂರು ಮಾಡುವಂತೆ ಕೋರಿದ್ದು, ನ್ಯಾಯಾಲಯವು ದಿನಾಂಕ:01–03–2010 ರಂದು ಈ ಕೆಳಕಂಡಂತೆ ತೀರ್ಪು ನೀಡಿರುತ್ತದೆ :–

"This petition is disposed of with direction to the respondent to consider the said representation of the petitioner in accordance to law and within an outer limit of four months from date of production of the certified copy of todays orders"

8. ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು, ಇವರು ದಿನಾಂಕ:21–03–2011ರ ಪತ್ರದಲ್ಲಿ ತಿಳಿಸುತ್ತಾ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದವರು ಗಿಡದಕೋನೆಹಳ್ಳಿ ಗ್ರಾಮದ ಸರ್ವೆ ನಂ.38 ಮತ್ತು 39 ರಲ್ಲಿ ಪ್ರಾಧಿಕಾರಕ್ಕೆ ಭೂಸ್ವಾಧೀನ ಪಡಿಸಿಕೊಂಡು 414 ನಿವೇಶನಗಳನ್ನು ಹಂಚಿಕೆ ಮಾಡಿರುವ ಹಾಗೂ ಫಲಾನುಭವಿಗಳಿಗೆ ನೋಂದಣಿ ಮಾಡಿಸಿರುವ ಪ್ರದೇಶದಲ್ಲಿ ಅನಧಿಕೃತವಾಗಿ ನಿರ್ಮಿಸಿಕೊಂಡಿದ್ದ 398 ಶೆಡ್‌ಗಳನ್ನು ತೆರವುಗೊಳಿಸಿ ಜಮೀನನ್ನು ಪ್ರಾಧಿಕಾರದ

ವಶಕ್ಕೆ ಪಡೆದು ಪ್ರಾಧಿಕಾರದ ಸ್ವತ್ತಿಗೆ ತಂತಿಬೇಲಿಯನ್ನು ನಿರ್ಮಾಣ ಮಾಡಿರುತ್ತಾರೆ. ಮುಂದುವರೆದು ಈ ಪ್ರದೇಶಕ್ಕೆ ಲಗತ್ತಾಗಿರುವ ಈ ಹಿಂದೆ ಈ ಶಿಕ್ಷಣ ಸಂಸ್ಥೆಗೆ ಮಂಜೂರು ಮಾಡಲಾಗಿದ್ದ 6 ಎಕರೆ ಜಾಗವನ್ನು ಹಾಗೆಯೇ ಖುಲ್ಲಾ ಬಿಟ್ಟಿರುವುದರಿಂದ ಅದೇ ಸದರಿ 6 ಎಕರೆ ಜಮೀನನ್ನು ಬುದ್ದ ಎಜುಕೇಷನ್ ಟ್ರಸ್ಟ್ ರವರಗೆ ಮಂಜೂರು ಮಾಡಬಹುದೆಂದು ತಿಳಿಸಿರುತ್ತಾರೆ.

9. ಆ ಮೇರೆಗೆ ಬುದ್ಧ ಎಜುಕೇಷನ್ ಸೊಸೈಟಿ & ಟ್ರಸ್ಟ್ ಇವರಿಗೆ ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಅವ್ವೇರಹಳ್ಳಿ ಗ್ರಾಮದ ಸರ್ವೆ ನಂ.10 ರಲ್ಲಿನ 6 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ನೀಡಲಾದ ಮಂಜೂರಾತಿ ರದ್ದುಪಡಿಸಿ, ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಗಿಡದಕೋನೇನಹಳ್ಳಿ ಗ್ರಾಮದ ಸರ್ವೆ ನಂ.38 ರಲ್ಲಿನ 6.00 ಎಕರೆ ಜಮೀನನ್ನು ಸದರಿ ಜಮೀನಿನ ಮಾರುಕಟ್ಟೆ ಬೆಲೆಯ ಶೇ.50 ರಷ್ಟು ವಿಧಿಸಿ ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು.

10. ಮಾನ್ಯ ಉಚ್ಚನ್ಯಾಯಾಲಯದ ಕೆಲವು ಆದೇಶಗಳ ಹೊರತಾಗಿಯೂ ಸದರಿ ಸಂಸ್ಥೆಗೆ ಜಮೀನನ್ನು ಮಂಜೂರು ಮಾಡಿದೆ ಎಂದು ಕೆಲವು ಮಾಧ್ಯಮಗಳಲ್ಲಿ ವರದಿಯಾಗಿರುತ್ತದೆ.

11. ನಂತರ ಮರುಪರಿಶೀಲಿಸಲಾಗಿ, ಈ ಕೆಳಕಂಡ ಅಂಶಗಳನ್ನು ಗಮನಿಸಲಾಗಿದೆ:–

(1) ರಿಟ್ ಅರ್ಜಿ ಸಂಖ್ಯೆ 17207/2009 ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ:26.07.2011ರಂದು ನೀಡಿರುವ ತೀರ್ಪನ್ನು ಸರ್ಕಾರದ ಗಮನಕ್ಕೆ ತಂದಿರುವುದಿಲ್ಲ.

(2) 1972ರಷ್ಟು ಹಿಂದೆಯೇ ಸರ್ಕಾರ ಸದರಿ ಜಮೀನನ್ನು ಭೂ ರಹಿತ ಗ್ರಾಮಾಂತರ ಪ್ರದೇಶದ ನಿವಾಸಿಗಳಿಗೆ ಮಂಜೂರು ಮಾಡುವ ಮುಖಾಂತರ ಜಮೀನಿನ ಮೇಲಿನ ಹಕ್ಕನ್ನು ಕಳೆದುಕೊಂಡಿರುತ್ತದೆ. ಆದರೆ ಸಂಬಂಧಪಟ್ಟ ವ್ಯಕ್ತಿಗಳಿಗೆ ಭೂಮಿ ಲಭ್ಯವಾಗಿರುವುದಿಲ್ಲ. ಆದಕಾರಣ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಸದರಿ ಜಮೀನನ್ನು ಸ್ವಾಧೀನ ಪಡಿಸಿಕೊಳ್ಳಲು ಅಧಿಸೂಚನೆ ಹೊರಡಿಸಿರುವುದಾಗಲೀ ಅಥವಾ ಬುದ್ಧ ಎಜುಕೇಷನ್ ಸೊಸೈಟಿ ಮತ್ತು ಟ್ರಸ್ಟ್ (ರಿ) ಇವರಿಗೆ ಮಂಜೂರು ಮಾಡುವ ಪ್ರಶ್ನೆಯಾಗಲೀ ಉದ್ಭವಿಸುವುದಿಲ್ಲ.

(3) ಸದರಿ ಮಂಜೂರಾತಿ ಆದೇಶ ರದ್ದುಗೊಳಿಸಬೇಕಾಗಿದ್ದಲ್ಲಿ, ಮಾನ್ಯ ನ್ಯಾಯಾಲಯವು ತಿಳಿಸಿರುವಂತೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳ ನಿಯಮ 25 ರನ್ವಯ ಯಾವುದೇ ಭೂ ಮಂಜೂರಾತಿ ರದ್ದುಗೊಳಿಸುವ ಮೊದಲು, ಮಂಜೂರಿದಾರರಿಗೆ ಹೇಳಿಕೆ ನೀಡಲು ಅವಕಾಶ ನೀಡಬೇಕಾಗಿರುತ್ತದೆ. ಪ್ರತಿವಾದಿಗಳು ಸಾರ್ವಜನಿಕ ನೋಟೀಸ್‌ನ್ನು ನೀಡಿದ್ದರೂ ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969)ರ ನಿಯಮ 25ರ ಅನ್ವಯ ಇರುವುದಿಲ್ಲ. ನೋಟೀಸ್ ನೀಡಬೇಕಾಗಿದ್ದಲ್ಲಿ ನಿಯಮ 25ರಲ್ಲಿರುವ ಕಾರಣ ನೀಡಲಾಗಿಲ್ಲ. ಅಂತಹ ಸಂದರ್ಭಗಳಲ್ಲಿ 910 ಫಲಾನುಭವಿಗಳ ಅರ್ಹತೆ, ವಿಚಾರಣೆ ನಡೆಸುವಂತೆ ಪ್ರತಿವಾದಿಗಳು ತಹಶೀಲ್ದಾರರಿಗೆ ಸೂಚಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. ಆದಕಾರಣ ಅನುಬಂಧ–ಜಿ ಯಲ್ಲಿರುವ ಸಾರ್ವಜನಿಕ ನೋಟೀಸ್ ನೀಡಿರುವ ಕ್ರಮವು ನಿಯಮ 25ಕ್ಕೆ ವಿರುದ್ಧವಾಗಿರುತ್ತದೆ. ಒಂದು ಪಕ್ಷ ತಹಶೀಲ್ದಾರರು ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969) ನಿಯಮ 25ರ ಅಡಿ ನೋಟೀಸ್ ನೀಡಬೇಕಾಗಿದ್ದಲ್ಲಿ ಸಂಬಂಧಪಟ್ಟ ಫಲಾನುಭವಿಗಳಿಗೆ ವೈಯಕ್ತಿಕವಾಗಿ ನೀಡಿ ಅವರಿಗೆ ಕಾಲಾವಕಾಶ ನೀಡಬೇಕಾಗಿರುತ್ತದೆ. ಅನುಬಂಧ–ಜಿ ನಲ್ಲಿರುವ ಸಾರ್ವಜನಿಕ ನೋಟೀಸ್ ಸೂಕ್ತವಾಗಿಲ್ಲದಿರುವ ಜೊತೆಗೆ ಕಾನೂನು ಬಾಹಿರವಾಗಿರುತ್ತದೆ. ಆ ಹಿನ್ನೆಲೆಯಲ್ಲಿ ನ್ಯಾಯಾಲಯವು ರಿಟ್ ಅರ್ಜಿಯನ್ನು ಭಾಗಶ: ಪುರಸ್ಕರಿಸಿದ್ದು, ಆದೇಶ ಸಂಖ್ಯೆ:ಎಲ್ಎನ್‌ಡಿ(ಎನ್)ಸಿಆರ್–42 ದಿನಾಂಕ:20.05.2009 [ಅನುಬಂಧ–ಇ] ಹಾಗೂ ದಿನಾಂಕ:14.06.2009ರ ಪತ್ರಿಕಾ ಪ್ರಕಟಣೆ ಇವುಗಳನ್ನು ಪ್ರತಿವಾದಿಗಳು 2 ಮತ್ತು 3 ಇವರು ಅನುಬಂಧ–ಜಿ ಯಲ್ಲಿ ಹೊರಡಿಸಿರುವುದನ್ನು ನ್ಯಾಯಾಲಯ ರದ್ದುಗೊಳಿಸಿದೆ.

(4) ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಮಾಹಿತಿ ಹಕ್ಕು ಕಾಯಿದೆಯಡಿ ಮಾಹಿತಿ ಕೋರಿ ದಿನಾಂಕ 02.08.2012 ರಂದು ಅರ್ಜಿ ಸಲ್ಲಿಸಿರುತ್ತಾರೆ.

(5) ಶ್ರೀ ಸಿ.ಆರ್.ನಾಗರಾಜ್ ಮತ್ತು ಇತರರು ದಿನಾಂಕ:13.08.2012ರಂದು ಮನವಿ ಸಲ್ಲಿಸುತ್ತಾ, ಸ.ನಂ.38 ಮತ್ತು 39ರಲ್ಲಿ ಗುರುತಿಸಿರುವ ನಿವೇಶನಗಳನ್ನು ನೀಡಿದಲ್ಲಿ ನ್ಯಾಯಾಲಯದಲ್ಲಿ ಬಾಕಿರುವ ಪ್ರಕರಣಗಳನ್ನು ಹಿಂತೆಗೆದುಕೊಳ್ಳುವುದಾಗಿ ತಿಳಿಸಿರುತ್ತಾರೆ.

(6) ಸಚಿವ ಸಂಪುಟದ ನಿರ್ಣಯದ ನಂತರ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 26226–26240/2012 ರಲ್ಲಿ ದಿನಾಂಕ 31.07.2012ರಂದು ತೀರ್ಪು ನೀಡುತ್ತಾ, ಎರಡೂ ಕಡೆಯವರೂ ಯಥಾಸ್ಥಿತಿ ಕಾಯ್ದುಕೊಳ್ಳುವಂತೆ ಆದೇಶಿಸಿದೆ.

ಜಿಲ್ಲಾಧಿಕಾರಿ, ಬೆಂಗಳೂರು ಇವರು ದಿನಾಂಕ:09.10.2012ರಂದು ಪತ್ರ ಬರೆಯುತ್ತಾ, ಎರಡೂ ಕಡೆಯವರೂ ಯಥಾಸ್ಥಿತಿ ಕಾಯ್ದುಕೊಳ್ಳುವಂತೆ ಉಚ್ಚ ನ್ಯಾಯಾಲಯ ಆದೇಶಿಸಿರುವುದಾಗಿ ತಿಳಿಸಿರುತ್ತಾರೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 522 ಎಲ್‌ಜಿಬಿ 2011 ಬೆಂಗಳೂರು ದಿನಾಂಕ:24.11.2012**

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಗಿಡದಕೋನೇನಹಳ್ಳಿ ಗ್ರಾಮದ ಸ.ನಂ.38ರಲ್ಲಿ 6.00 ಎಕರೆ ಜಮೀನನ್ನು ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 522 ಎಲ್‌ಜಿಬಿ 2011 ದಿನಾಂಕ:23.06.2012ರಲ್ಲಿ ಬುದ್ಧ ಎಜುಕೇಷನ್ ಟ್ರಸ್ಟ್(ರಿ), ಮಲ್ಲತ್ತಳ್ಳಿ, ಬೆಂಗಳೂರು ಇವರಿಗೆ

ಮಾರುಕಟ್ಟೆ ದರದ ಶೇಕಡಾ 50 ರಷ್ಟನ್ನು ವಿಧಿಸಿ ಮಂಜೂರು ಮಾಡಿರುವುದನ್ನು ಜಾರಿಗೆ ಬರದಂತೆ ತಡೆಹಿಡಿಯಲಾಗಿದೆ. ಅದಲ್ಲದೆ, ಎರಡೂ ಕಡೆಯವರೂ ಯಥಾಸ್ಥಿತಿ ಕಾಯ್ದುಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–I)

**P.R. 2284**

## FOREST, ECOLOGY AND ENVIRONMENT SECRETARIAT

**Sub:** Diversion of 0.90 ha. of forest land in forest Sy.No.517M A1A of Honnavara of for construction of Government First Grade College building in favour of the Principal, Government First Grade College, Honnavar.

**Read:**
1. Letter No. A5(2)GFL.CR.18/07-08, Dated:25/11/2008 of Principal Chief Conservator of Forests Bangalore.
2. State Government letter No. FEE 1 FLL 2009, dated: 04.03.2009.
3. Letter No.4-KRB588/2009-BAN/4739,dated:09.06.2009 of Government of India, Ministry of Environment and Forests,Bangalore.
4. Letter No. A5(2)GFL.CR18/07-08, Dated:10.01.2012 of Principal Chief Conservator of Forests, Bangalore.
5. State Government letter No. FEE 1 FLL 2009, dated: 01.06.2012.
6. Letter No.4-KRB588/2009-BAN/1560, dated: 24.07.2012 of Government of India, Ministry of Environment and Forests,Bangalore.

**PREAMBLE:**

The Principal Chief Conservator of Forests, Bangalore vide his letter dated:25.11.2008 read at (1) above has submitted the proposal to obtain the approval of Government of India under Section 2 of The Forest (Conservation) Act,1980 for diversion of 0.90 ha. of forest land in forest Sy.No.517M A1A of Honnavara of for construction of Government First Grade College building in favour of the Principal, Government First Grade College, Honnavar subject to certain conditions.

Accordingly the proposal was recommended to Government of India vide State Government letter dated 04.03.2009 read at (2) above.

The Government of India, Ministry of Environment and Forests, Regional office, Bangalore vide their letter dated 09.06.2009 read at (3) above has given its approval in Principle (Stage-I) for diversion of 0.90 ha. forest land subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 10.01.2012 furnished the compliance report read at (4) above and the same has been sent to Government of India vide State Government letter dated: 01.06.2012 read at (5) above.

Government of India Ministry of Environment and Forests, Regional Office, South Zone, Bangalore vide their letter dated 24/07/2012 read at (6) above has conveyed its approval (Stage-II) under Section 2 of The Forest (Conservation) Act,1980 for diversion of 0.90 ha. of forest land in forest Sy.No.517M A1A of Honnavara of for construction of Government First Grade College building in favour of the Principal, Government First Grade College, Honnavar subject to certain conditions.

The proposal has been examined in detail and hence the order.

**GOVERNMENT ORDER NO. FEE 1 FLL 2009, BANGALORE, DATED:30/07/2012.**

In the Circumstances explained in the preamble above, Government are pleased to accord approval under Section 2 of Forest (Conservation) Act, 1980 for diversion of 0.90 ha. of forest land in forest Sy.No.517M A1A of Honnavara of for construction of Government First Grade College building in favour of the Principal, Government First Grade College, Honnavar subject to the following conditions.

1. The legal Status of the forest land shall remain unchanged.
2. Demarcation of the proposed forest area shall be carried out by erecting cement concrete pillars duly numbered at an interval of 20 mts. at the cost of user agency.
3. Western boundary of the area proposed to be diverted may be made continous with the lines separating the reserve forest Sy.No.517M A1A & Malki land Sy.No.500 keeping the extent of the area to be diverted un changed.

4. Additional amount of the Net Present Value(NPV) of the diverted forest land if any, becoming due after revision of the same by the Hon`ble Supreme Court of India in future, shall be charged by the State Government from the User Agency. The User Agency shall furnish an undertaking to this effect.
5. The total forest area utilized for the project shall not exceed 0.90 ha. Handing and taking over of land and commencement of work in the land shall be done with a period of two years from the date of Stage-II approval
6. The land shall be utilized only for the purpose for which it is released.
7. If the land is not required for the purpose for which it is granted the same should be resumed back to the Forest Department by the Deputy Conservator of Forests under section 82 of the Karnataka Forest Act 1963.
8. The user agency has to pay the lease rent as fixed by the Government at the time of sanction and any subsequent orders in this regard.
9. The lease is granted for 20(Twenty) years.
10. The Karnataka Forest Act 1963 and Rules 1969 will be applicable for any violation.
11. If the land is not utilized for the purpose within 2 years, the forest land shall be resumed back by the Conservator of Forests by following the provisions under section 82 of the Karnataka Forest Act 1963.
12. The user agency shall pay the cost of raising compensatory afforestation over the degraded forest area at the rate prevailing at the time of sanction(at present it is Rs. 1,52,000/-).
13. The user agency has to pay the Net Present Value as per the Hon`ble Supreme Court of India Orders dated: 28.03.2008 and 09.05.2008.
14. Any other conditions that the Additional Principal Chief Conservator of Forests (Central), Regional Office, Bangalore may impose from time to time for protection, improvement of flora and fauna in the forest area and public convenience, shall also be applicable.
15. Any other condition imposed by the Government of India /Government of Karnataka.

By order and in the name of the Governor of Karnataka,

**H.C.RAJAPPA**

Under Secretary to Government,

**P.R. 2044** Forest, Ecology and Environment Department.

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬಿಜಾಪುರ ತಾಲ್ಲೂಕು ಬಿಜಾಪುರ ಜಿಲ್ಲೆಯ 5 ಸಣ್ಣ ನೀರಾವರಿ ಕೆರೆಗಳನ್ನು ನೀರು ತುಂಬಲು ಜಲಸಂಪನ್ಮೂಲ ಇಲಾಖೆಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: CE/MI(N)Z/BJP/PB-9/Filling up of Tanks/2012–13/4986, ದಿನಾಂಕ: 01–09–2012.

**ಪ್ರಸ್ತಾವನೆ:**

ಬಿಜಾಪುರ ತಾಲ್ಲೂಕು, ಬಿಜಾಪುರ ಜಿಲ್ಲೆಯ ಕೆರೆಗಳಲ್ಲಿ ನೀರು ತುಂಬಲು 5 ಸಣ್ಣ ನೀರಾವರಿ ಕೆರೆಗಳನ್ನು ಜಲಸಂಪನ್ಮೂಲ ಇಲಾಖೆಗೆ ವರ್ಗಾಯಿಸುವ ಬಗ್ಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ವಿವರಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 13 ಕೆಜಿದು 2012, ಬೆಂಗಳೂರು, ದಿನಾಂಕ: 27–11–2012**

ಬಿಜಾಪುರ ತಾಲ್ಲೂಕು, ಬಿಜಾಪುರ ಜಿಲ್ಲೆಯ ಈ ಕೆಳಕಂಡ 5 ಕೆರೆಗಳನ್ನು ನೀರು ತುಂಬಲು ಜಲಸಂಪನ್ಮೂಲ ಇಲಾಖೆಗೆ ಕೆಳಕಂಡ ಷರತ್ತುಗಳಿಗೊಳಪಟ್ಟು ಹಸ್ತಾಂತರಿಸಲಾಗಿದೆ.

1) ಸೋಮದೇವರಟ್ಟಿ ಕೆರೆ
2) ದನ್ನರಗಿ ಇಂಗುಕೆರೆ

3) ಜಲಗೆರಿ ಇಂಗುಕೆರೆ

4) ಲೊಗಾವಿ ಕೆರೆ

5) ಬಿಜ್ಜರಗಿ ಕೆರೆ

**ಷರತ್ತುಗಳು:**

1) ಕೆರೆಗಳನ್ನು ನೀರು ತುಂಬುವ ಉದ್ದೇಶಗಳಿಗಾಗಿ ಮಾತ್ರ ಹಸ್ತಾಂತರಿಸಲಾಗಿದೆ.

2) ಹಾಲಿ ಇರುವ ಕೆರೆಯ ಅಚ್ಚುಕಟ್ಟುದಾರರಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳುವುದು ಮತ್ತು ಬೇರೆ ಯಾವುದೇ ಉದ್ದೇಶಗಳಿಗೆ ಬಳಸದಂತೆ ಹಾಗೂ ಕಟ್ಟಡ, ರಸ್ತೆ ಇತ್ಯಾದಿಗಳನ್ನು ಕೆರೆ ಅಂಗಳದಲ್ಲಿ ನಿರ್ಮಿಸಬಾರದು.

3) ಕೆರೆ ಒತ್ತುವರಿಯಾಗಿದ್ದಲ್ಲಿ ಒತ್ತುವರಿಯನ್ನು ತಡೆಗಟ್ಟಲು, ತೆರವುಗೊಳಿಸಲು ಕ್ರಮವಹಿಸತಕ್ಕದ್ದು ಮತ್ತು ಯಾವುದೇ ತರಹದ ಮಾಲಿನ್ಯ (ಜಲ, ಘನ) ಉಂಟಾಗದಂತೆ ಕ್ರಮ ತೆಗೆದುಕೊಳ್ಳುವುದು.

4) ಅಗತ್ಯವಾದಾಗ ಕೆರೆಯನ್ನು ಹಿಂದಕ್ಕೆ ಪಡೆಯುವ / ಮರು ಹಂಚಿಕೆ ಮಾಡುವ ಹಕ್ಕನ್ನು ಸರ್ಕಾರವು ಹೊಂದಿರುತ್ತದೆ.

5) ಕೊಳಚೆ ನೀರು ಮತ್ತು ಹೊಲಸನ್ನು ಕೆರೆಗಳಿಗೆ ಹರಿಸಬಾರದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

P.R. 2236

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ತುಮಕೂರು ತಾಲ್ಲೂಕು, ಹೆಬ್ಬೂರು ಹೋಬಳಿ, ಲಿಂಗಾಪುರ ಕೆರೆಯನ್ನು ಸಣ್ಣ ನೀರಾವರಿ ಇಲಾಖೆಯಿಂದ ಕಾವೇರಿ ನೀರಾವರಿ ನಿಗಮಕ್ಕೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:**

1) ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಇವರ ಪತ್ರ ಸಂಖ್ಯೆ: ಕಾನೀನಿ/ತಾಂತ್ರಿಕ–2/489/2011–12, ದಿನಾಂಕ: 23–02–2012.

2) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ತಾಂಸ–1/ಸ.ಇಂ.1/ಕೆರೆ ಹಸ್ತಾಂತರ/2012–13/2610, ದಿನಾಂಕ: 28–07–2012.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು ವ್ಯಾಪ್ತಿಯ ಹೆಬ್ಬೂರು ಹೋಬಳಿ, ಲಿಂಗಾಪುರ ಕೆರೆಯು ಲಿಂಗಾಪುರ ಮತ್ತು ರಾಗಿ ಮುದ್ದನಹಳ್ಳಿ ಗ್ರಾಮಗಳ ನಡುವೆ ಇದೆ. ಸದರಿ ಕೆರೆಯ ಎಡಭಾಗದ ಕೋಡಿ ಮುಖಾಂತರ ಸದಾ ನೀರು ಹರಿಯುತ್ತಿದ್ದು, ಕೋಡಿಯನ್ನು ದಾಟಿ ಗ್ರಾಮಸ್ಥರು ಓಡಾಡುವುದು ಕಷ್ಟಕರವಾಗಿದೆ. ಈ ಹಿನ್ನಲೆಯಲ್ಲಿ ಕೋಡಿಯ ಭಾಗದಲ್ಲಿ ಒಂದು ಕ್ರಾಸ್ ವೇ ನಿರ್ಮಿಸಿ ಕೊಡುವಂತೆ ಮತ್ತು ಕೆರೆಯಲ್ಲಿ ತುಂಬಿರುವ ಹೂಳು, ಜಂಗಲ್ ತೆಗೆಯಲು ಅನುದಾನವನ್ನು ಒದಗಿಸುವಂತೆ ಕೋರುತ್ತಾ, ಸಣ್ಣ ನೀರಾವರಿ ಇಲಾಖೆಯ ಅಧೀನದಲ್ಲಿರುವ ಈ ಕೆರೆಯನ್ನು ಅಭಿವೃದ್ಧಿಪಡಿಸಬೇಕಾದಲ್ಲಿ ಕಾವೇರಿ ನೀರಾವರಿ ನಿಗಮಕ್ಕೆ ಹಸ್ತಾಂತರಿಸಬೇಕಾಗಿದ್ದು, ಈ ಬಗ್ಗೆ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 23–02–2012ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ ರವರು ಕೋರಿರುತ್ತಾರೆ.

ಈ ಬಗ್ಗೆ ಪರಿಶೀಲಿಸಿ ವರದಿ ನೀಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ ರವರನ್ನು ಕೋರಿರುವ ಹಿನ್ನಲೆಯಲ್ಲಿ ತುಮಕೂರು ತಾಲ್ಲೂಕು, ಹೆಬ್ಬೂರು ಹೋಬಳಿ, ಲಿಂಗಾಪುರ ಕೆರೆಯನ್ನು ಮಾನ್ಯ ಶಾಸಕರು, ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರ ರವರು ಸಣ್ಣ ನೀರಾವರಿ ಇಲಾಖೆಯಿಂದ ಕಾವೇರಿ ನೀರಾವರಿ ನಿಗಮಕ್ಕೆ ಹಸ್ತಾಂತರಿಸಿ, ನಿಗಮದ ವತಿಯಿಂದಲೇ ಕೆರೆಯನ್ನು ಅಭಿವೃದ್ಧಿಪಡಿಸಲು ಇಚ್ಛಿಸಿರುವುದರಿಂದ ಸದರಿ ಕೆರೆಯನ್ನು ಸಣ್ಣ ನೀರಾವರಿ ಇಲಾಖೆಯಿಂದ ಕಾವೇರಿ ನೀರಾವರಿ ನಿಗಮಕ್ಕೆ ಹಸ್ತಾಂತರಿಸುವ ಕುರಿತು ತೀರ್ಮಾನ ಕೈಗೊಳ್ಳಬಹುದಾಗಿದೆ ಎಂದು ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ದಿನಾಂಕ: 28–07–2012ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 41 ಮಸಾವಿ 2012, ಬೆಂಗಳೂರು, ದಿನಾಂಕ: 23ನೇ ನವೆಂಬರ್ 2012.**

ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು ವ್ಯಾಪ್ತಿಯ ಹೆಬ್ಬೂರು ಹೋಬಳಿ, ಲಿಂಗಾಪುರ ಸಣ್ಣ ನೀರಾವರಿ ಇಲಾಖೆಯ ಕೆರೆಯನ್ನು ಕಾವೇರಿ ನೀರಾವರಿ ನಿಗಮ ನಿಯಮಿತ, ಜಲಸಂಪನ್ಮೂಲ ಇಲಾಖೆ ವತಿಯಿಂದ ಅಭಿವೃದ್ಧಿಪಡಿಸುವ ಉದ್ದೇಶದಿಂದ ಕೆಳಕಂಡ ಷರತ್ತುಗಳಿಗೊಳಪಟ್ಟು ಹಸ್ತಾಂತರಿಸಲಾಗಿದೆ.

**ಷರತ್ತುಗಳು:**

1) ಕೆರೆಯನ್ನು ಪುನರುಜ್ಜೀವನ, ಸಂರಕ್ಷಣೆ ಮತ್ತು ಅಭಿವೃದ್ಧಿಯ ಉದ್ದೇಶಗಳಿಗಾಗಿ ಮಾತ್ರ ಹಸ್ತಾಂತರಿಸಲಾಗಿದೆ.

2) ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೆತ್ತಿಕೊಳ್ಳುವುದಕ್ಕೆ ಮುಂಚೆ ಕಂದಾಯ ಇಲಾಖೆಯ ಅಗತ್ಯ ನೆರವಿನೊಂದಿಗೆ ಕೆರೆಯ ಒತ್ತುವರಿಯನ್ನು ತೆರವುಗೊಳಿಸುವುದು.

3) ಒತ್ತುವರಿಯಿಂದ ಕೆರೆಯನ್ನು ರಕ್ಷಿಸುವ ದೃಷ್ಟಿಯಿಂದ ಮತ್ತು ಕೆರೆಯ ಪರಿಣಾಮಕಾರಿ ನಿರ್ವಹಣೆಗಾಗಿ ಹಾಗೂ ಕೆರೆಯಲ್ಲಿನ ಪ್ರಾಣಿ, ಪಕ್ಷಿ ಸಂಕುಲಗಳ ನೆಲೆಯ ಸಂರಕ್ಷಣೆಯನ್ನು ಸಿಬ್ಬಂದಿಗಳ ನಿಕಟ ಮೇಲ್ವಿಚಾರಣೆಯಲ್ಲಿ ಕೆರೆಗಳ ಸಂರಕ್ಷಣೆ, ಅಭಿವೃದ್ಧಿ ಮತ್ತು ನಿರ್ವಹಣೆಯನ್ನು ಕೈಗೆತ್ತಿಕೊಳ್ಳತಕ್ಕದ್ದು.

4) ಕೆರೆಯ ಅಭಿವೃದ್ಧಿಯನ್ನು ಕೈಗೆತ್ತಿಕೊಳ್ಳುವ ಮುನ್ನ ವಿವರವಾದ ಯೋಜನಾ ವರದಿಯನ್ನು ಸಿದ್ಧಪಡಿಸುವುದು.

5) ಹಾಲಿ ಇರುವ ಕೆರೆಯ ಅಚ್ಚುಕಟ್ಟುದಾರರಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳುವುದು ಮತ್ತು ಬೇರೆ ಯಾವುದೇ ಉದ್ದೇಶಗಳಿಗೆ ಬಳಸದಂತೆ ಕಟ್ಟಡ, ರಸ್ತೆ ಇತ್ಯಾದಿಗಳನ್ನು ಕೆರೆ ಅಂಗಳದಲ್ಲಿ ನಿರ್ಮಿಸಕೂಡದು.

6) ಕೆರೆಯ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸುವಾಗ ಕೆರೆಯ ಏರಿ, ತೂಬು, ಕೋಡಿಯ ಮೂಲ ಸ್ವರೂಪಕ್ಕೆ ಧಕ್ಕೆಯಾಗದಂತೆ ವಿನ್ಯಾಸ ಮತ್ತು ಮಾರ್ಪಾಡುಗಳ ಕಾರ್ಯನಿರ್ವಹಿಸುವುದು.

7) ಕೆರೆಯ ವ್ಯಾಪ್ತಿಯ ನೀರಾವರಿ ಪ್ರದೇಶಕ್ಕೆ ಹಾಗೂ ನೀರಾವರಿಗೆ ಯಾವುದೇ ಅಡಚಣೆ ಉಂಟಾಗದಂತೆ ಹಾಲಿ ಇರುವ ಕಾಲುವೆಗಳನ್ನು ಸುಸ್ಥಿತಿಯಲ್ಲಿ ನಿರ್ವಹಿಸುವುದು.

8) ಕೆರೆ ಒತ್ತುವರಿಯಾಗಿದ್ದಲ್ಲಿ ಒತ್ತುವರಿಯನ್ನು ತಡೆಗಟ್ಟಲು, ತೆರವುಗೊಳಿಸಲು ಕ್ರಮವಹಿಸತಕ್ಕದ್ದು ಮತ್ತು ಯಾವುದೇ ತರಹದ ಮಾಲಿನ್ಯ (ಜಲ, ಘನ) ಉಂಟಾಗದಂತೆ ಕ್ರಮ ತೆಗೆದುಕೊಳ್ಳುವುದು.

9) ಅಗತ್ಯವಾದಾಗ ಕೆರೆಯನ್ನು ಹಿಂದಕ್ಕೆ ಪಡೆಯುವ / ಮರು ಹಂಚಿಕೆ ಮಾಡುವ ಹಕ್ಕನ್ನು ಸರ್ಕಾರವು ಹೊಂದಿರುತ್ತದೆ.

10) ಕೊಳಚೆ ನೀರು ಮತ್ತು ಹೊಲಸನ್ನು ಕೆರೆಗಳಿಗೆ ಹರಿಸಬಾರದು. ಅಗತ್ಯ ತಾಂತ್ರಿಕ ಅಭಿಪ್ರಾಯದೊಂದಿಗೆ ನೆಡುತೋಪುಗಳನ್ನು ಕೈಗೆತ್ತಿಕೊಳ್ಳುವುದು.

11) ಈ ಕೆರೆಯಲ್ಲಿ ವಿವಿಧ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸುವಾಗ ಕರ್ನಾಟಕ ಅರಣ್ಯ ಇಲಾಖೆ ಮತ್ತು ಇತರ ಸಂಸ್ಥೆಗಳಿಂದ ಸೃಜಿಸಲ್ಪಟ್ಟಿರುವ ಸ್ವತ್ತುಗಳನ್ನು ಪಟ್ಟಿ ಮಾಡತಕ್ಕದ್ದು ಮತ್ತು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು.

12) ಕೇಂದ್ರ ಸರ್ಕಾರದ ಅರಣ್ಯ ಮತ್ತು ಪರಿಸರ ಇಲಾಖೆ, ಕೇಂದ್ರ ಸರ್ಕಾರ ಇವರ ಆದೇಶ ದಿನಾಂಕ: 04–12–2010 ರಲ್ಲಿ ನಿರ್ದೇಶಿಸಿರುವ ಮಾನದಂಡಗಳನುಸಾರ ಮತ್ತು ಗೌರವಾನ್ವಿತ ನ್ಯಾಯಾಲಯಗಳ ತೀರ್ಪಿನನ್ವಯ ಕೆರೆ ಸಂರಕ್ಷಣೆ / ಅಭಿವೃದ್ಧಿ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**P.R. 2211**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾಂ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಕಮತನೂರು ಸಣ್ಣ ನೀರಾವರಿ ಕೆರೆಯು ಭಾರಿ ಮಳೆಯಿಂದ ಒಡೆದು ರೈತರ ಬೆಳೆ ಹಾನಿಯಾದ ಜಮೀನುಗಳಿಗೆ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2007–08/5412, ದಿನಾಂಕ: 23–06–2007 ಮತ್ತು ಕೊನೆಗೊಂಡ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2011–12/4620, ದಿನಾಂಕ: 02–09–2011.

**ಪ್ರಸ್ತಾವನೆ:**

ಬೆಳಗಾಂ ಜಿಲ್ಲೆ ಹುಕ್ಕೇರಿ ತಾಲ್ಲೂಕು ಕಮತನೂರು ಸಣ್ಣ ನೀರಾವರಿ ಕೆರೆಯು ಭಾರಿ ಮಳೆಯಿಂದ ಒಡೆದು ರೈತರ ಜಮೀನುಗಳ ಬೆಳೆ ಹಾನಿಯಾದ ಬಗ್ಗೆ ಜಿಲ್ಲಾಧಿಕಾರಿ, ಬೆಳಗಾಂ ರವರ ವರದಿ ಆಧರಿಸಿ ಪರಿಹಾರದ ಮೊತ್ತ ರೂ.10,73,500/– ಗಳನ್ನು ಬಿಡುಗಡೆ ಮಾಡುವಂತೆ ಕೋರಿ ಮೇಲೆ ಓದಲಾದ ಪತ್ರ ದಿನಾಂಕ: 23–06–2007 ರಲ್ಲಿ ಮುಖ್ಯ ಇಂಜಿನಿಯರ್ ರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಮುಖ್ಯ ಇಂಜಿನಿಯರ್‌ರವರ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಪರಿಹಾರ ಧನದ ಮಂಜೂರಾತಿಗಾಗಿ ಆರ್ಥಿಕ ಇಲಾಖೆಯನ್ನು ಸಂಪರ್ಕಿಸಲಾಗಿತ್ತು. ಆರ್ಥಿಕ ಇಲಾಖೆಯು ಹೆಚ್ಚಿನ ಮಳೆಯಿಂದಾಗಿ ಈ ಹಾನಿ ಉಂಟಾಗಿರುವುದರಿಂದ ಈ ಬಗ್ಗೆ ಕಂದಾಯ ಇಲಾಖೆಗೆ ಸೂಕ್ತ ಪ್ರಸ್ತಾವನೆ ಸಲ್ಲಿಸುವಂತೆ ಸೂಚಿಸಿತ್ತು. ಅದರಂತೆ, ಕಂದಾಯ ಇಲಾಖೆಯನ್ನು ಸಂಪರ್ಕಿಸಲಾಗಿ ಕಂದಾಯ ಇಲಾಖೆ ನೀಡಿದ ಸೂಚನೆಯಂತೆ ಹಾನಿಗೊಳಗಾದ ಜಮೀನುಗಳಿಗೆ ಪರಿಹಾರವನ್ನು ಲೆಕ್ಕಹಾಕಿದಾಗ ತಹಶೀಲ್ದಾರ್‌ರವರು ಕೋರಿರುವ ಮೊತ್ತಕ್ಕಿಂತ ತುಂಬಾ ಕಡಿಮೆ ಮೊತ್ತ ಬರುವುದಾಗಿ ಇಷ್ಟು ಕಡಿಮೆ ಮೊತ್ತವನ್ನು ಸ್ವೀಕರಿಸಲು ರೈತರು ವಿರೋಧ ವ್ಯಕ್ತಪಡಿಸಿದ್ದರು. ಕೇವಲ ಬೆಳೆ ಹಾನಿಯಲ್ಲದೇ ಆ ಜಮೀನುಗಳಲ್ಲಿ ನಿರ್ಮಿಸಿದ್ದ ಬಾವಿ, ಪಂಪ್‌ಸೆಟ್‌ಗಳು, ಪೈಪ್‌ಲೈನ್‌ಗಳು ಹಾನಿಗೊಳಗಾಗಿರುವುದರಿಂದ, ಇವುಗಳಿಗೆ ಮಾರ್ಗಸೂಚಿಯಲ್ಲಿ ಅವಕಾಶ ಇಲ್ಲದೇ ಇರುವುದರಿಂದ, ಇದೊಂದು ವಿಶೇಷ ಪ್ರಕರಣವೆಂದು ರೂ.10,73,500/– ಲಕ್ಷ ಹಣ ಬಿಡುಗಡೆಗೆ ಆರ್ಥಿಕ ಇಲಾಖೆಯನ್ನು ಕೋರಲಾಗಿತ್ತು. ಆದರೆ, ಪುನಃ ಆರ್ಥಿಕ ಇಲಾಖೆಯು ಈಗಾಗಲೇ ನೀಡಿರುವ ಕಂದಾಯ ಇಲಾಖೆಯ ಅಭಿಪ್ರಾಯದಂತೆ

ಮುಂದಿನ ಕ್ರಮ ಕೈಗೊಳ್ಳಲು ಸೂಚಿಸಿದ್ದರಿಂದ ಪ್ರಕೃತಿ ವಿಕೋಪ ಪರಿಹಾರ ನಿಧಿಯಡಿ ಅನುದಾನಕ್ಕಾಗಿ ನಿಗದಿಪಡಿಸಿರುವ ಮಾರ್ಗಸೂಚಿಗಳ ಪ್ರಕಾರ ಪರಿಹಾರ ಧನವನ್ನು ಲೆಕ್ಕಹಾಕಿ ಪ್ರಸ್ತಾವನೆ ಸಲ್ಲಿಸುವಂತೆ ಮುಖ್ಯ ಇಂಜಿನಿಯರ್ ರವರಿಗೆ ಕೋರಿದ್ದು, ಅದರಂತೆ ಮುಖ್ಯ ಇಂಜಿನಿಯರ್‌ರವರು ರೂ.75,964/– ಗಳಿಗೆ ಲೆಕ್ಕಹಾಕಿ ಈ ಮೊತ್ತವನ್ನು ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಕೊನೆಗೊಂಡ ಪತ್ರ ದಿನಾಂಕ: 02–09–2011 ರಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 111 ಮಸಾವಿ 2011, ಬೆಂಗಳೂರು, ದಿನಾಂಕ: 17–10–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಬೆಳಗಾಂ ಜಿಲ್ಲೆ ಹುಕ್ಕೇರಿ ತಾಲ್ಲೂಕು ಕಮತನೂರು ಸಣ್ಣ ನೀರಾವರಿ ಕೆರೆಯು ಭಾರಿ ಮಳೆಯಿಂದ ಒಡೆದು ರೈತರ ಬೆಳೆ ಹಾನಿಯಾದ ಜಮೀನುಗಳಿಗೆ ಪರಿಹಾರ ನೀಡಲು ರೂ.75,964/– (ರೂ.ಎಪ್ಪತ್ತೈದು ಸಾವಿರದ ಒಂಬೈನೂರ ಅರವತ್ತ ನಾಲ್ಕು ಮಾತ್ರ) ಗಳನ್ನು ಬಿಡುಗಡೆ ಮಾಡಲು ಸರ್ಕಾರವು ಆದೇಶಿಸಿದೆ.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ–4702–00–800–1–00–132 (ಯೋ) ಭೂಸ್ವಾಧೀನ ವೆಚ್ಚಗಳಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಲ್ಲಿ ರೂ.75,964/– ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ: 20–10–2010 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**P.R. 2169**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಕೋಲಾರ ಜಿಲ್ಲೆ, ಶ್ರೀನಿವಾಸಪುರ ತಾಲ್ಲೂಕು, ಜಲಗೊಂಡನಹಳ್ಳಿ ಕೆರೆಯನ್ನು ಗ್ರಾಮೀಣ ನೀರು ಸರಬರಾಜು ಇಂಜಿನಿಯರಿಂಗ್ ವಿಭಾಗ, ಕೋಲಾರ ಇವರಿಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಮುಸದ/ತಾಂಸ–6/ಸ.ಇಂ.7/ಕೋಲಾರ/2012–13/3908, ದಿನಾಂಕ: 20–11–2012.

**ಪ್ರಸ್ತಾವನೆ:**

ಕೋಲಾರ ಜಿಲ್ಲೆ, ಶ್ರೀನಿವಾಸಪುರ ತಾಲ್ಲೂಕು, ಜಲಗೊಂಡನಹಳ್ಳಿ ಕೆರೆಯಿಂದ ಸುತ್ತಲಿನ ಗ್ರಾಮಗಳಿಗೆ ಶುದ್ಧ ಕುಡಿಯುವ ನೀರನ್ನು ಒದಗಿಸಲು ದಿನಾಂಕ: 11–06–2011 ರಂದು ನಡೆದ ರಾಜ್ಯ ಮಟ್ಟದ ಉನ್ನತ ಅಧಿಕಾರ ಸಮಿತಿಯಲ್ಲಿ ಪಿ.ಎಸ್.ಆರ್. ಗಳನ್ನು ತಯಾರಿಸಲು ಅನುಮೋದನೆ ದೊರೆತಿರುವುದರಿಂದ ಕುಡಿಯುವ ನೀರಿನ ಯೋಜನೆಯನ್ನು ಅನುಷ್ಠಾನಗೊಳಿಸಲು ಸದರಿ ಕೆರೆಯನ್ನು ಸಣ್ಣ ನೀರಾವರಿ ಇಲಾಖೆಯಿಂದ ಗ್ರಾಮೀಣ ನೀರು ಸರಬರಾಜು ಇಂಜಿನಿಯರಿಂಗ್ ವಿಭಾಗ, ಕೋಲಾರ ಇವರಿಗೆ ಹಸ್ತಾಂತರಿಸುವ ಬಗ್ಗೆ ಶಿಫಾರಸ್ಸು ಮಾಡುವಂತೆ ಕಾರ್ಯನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಕೋಲಾರ ರವರು ಕೋರಿರುವ ಹಿನ್ನಲೆಯಲ್ಲಿ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಬೆಂಗಳೂರು ರವರು ಈ ಕೆರೆಯನ್ನು ಹಸ್ತಾಂತರಿಸಲು ಅನುಮತಿ ಕೋರಿ ಶಿಫಾರಸ್ಸು ಮಾಡಿರುವ ಆಧಾರದ ಮೇಲೆ ಹಾಗೂ ಜಲಗೊಂಡನಹಳ್ಳಿ ಕೆರೆಯ ನಿರ್ಮಾಣ ಕಾಮಗಾರಿಯು 2010–ಸೆಪ್ಟೆಂಬರ್ ತಿಂಗಳಲ್ಲಿ ಪೂರ್ಣಗೊಂಡಿದ್ದು, ಇಲ್ಲಿಯವರೆಗೂ ಸಂಪೂರ್ಣವಾಗಿ ನೀರು ತುಂಬದೇ ಅಚ್ಚುಕಟ್ಟು ಸಂಪೂರ್ಣವಾಗಿ ತರಿ ಜಮೀನಾಗಿ ಪರಿವರ್ತನೆಯಾಗದಿರುವುದರಿಂದ ಅಚ್ಚುಕಟ್ಟಿಗೆ ನೀರು ಒದಗಿಸುವ ಉದ್ದೇಶವು ನೆರವೇರುವುದಿಲ್ಲ. ಅದರ ಬದಲಿಗೆ ಕೆಲವೊಂದು ಹಳ್ಳಿಗಳಿಗೆ ಕುಡಿಯುವ ನೀರನ್ನು ಒದಗಿಸಬಹುದಾಗಿದ್ದು, ಈ ಕೆರೆಯನ್ನು ಹಸ್ತಾಂತರಿಸುವ ಬಗ್ಗೆ ಅನುಮತಿಯನ್ನು ನೀಡುವಂತೆ ಮೇಲೆ ಓದಲಾದ ದಿನಾಂಕ: 20–11–2012ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರು ಕೋರಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 165 ಮಸಾವಿ 2012, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್ 2012.**

ಕೋಲಾರ ಜಿಲ್ಲೆ, ಶ್ರೀನಿವಾಸಪುರ ತಾಲ್ಲೂಕು, ಜಲಗೊಂಡನಹಳ್ಳಿ ಕೆರೆಯನ್ನು ಸಣ್ಣನೀರಾವರಿ ಇಲಾಖೆಯಿಂದ ಗ್ರಾಮೀಣ ನೀರು ಸರಬರಾಜು ಇಂಜಿನಿಯರಿಂಗ್ ವಿಭಾಗ, ಕೋಲಾರ ಇವರಿಗೆ ಸುತ್ತಲಿನ ಗ್ರಾಮಗಳಿಗೆ ಶುದ್ಧ ಕುಡಿಯುವ ನೀರನ್ನು ಒದಗಿಸುವ ಉದ್ದೇಶದಿಂದ ಕೆಳಕಂಡ ಷರತ್ತುಗಳಿಗೊಳಪಟ್ಟು ಹಸ್ತಾಂತರಿಸಲಾಗಿದೆ.

**ಷರತ್ತುಗಳು:**

1) ಕೆರೆಯನ್ನು ಪುನರುಜ್ಜೀವನ, ಸಂರಕ್ಷಣೆ, ಅಭಿವೃದ್ಧಿಯ ಮತ್ತು ಕುಡಿಯುವ ನೀರನ್ನು ಒದಗಿಸುವ ಉದ್ದೇಶಗಳಿಗಾಗಿ ಮಾತ್ರ ಹಸ್ತಾಂತರಿಸಲಾಗಿದೆ.
2) ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೆತ್ತಿಕೊಳ್ಳುವುದಕ್ಕೆ ಮುಂಚೆ ಕಂದಾಯ ಇಲಾಖೆಯ ಅಗತ್ಯ ನೆರವಿನೊಂದಿಗೆ ಕೆರೆಯ ಒತ್ತುವರಿಯನ್ನು ತೆರವುಗೊಳಿಸುವುದು.

3) ಒತ್ತುವರಿಯಿಂದ ಕೆರೆಯನ್ನು ರಕ್ಷಿಸುವ ದೃಷ್ಟಿಯಿಂದ ಮತ್ತು ಕೆರೆಯ ಪರಿಣಾಮಕಾರಿ ನಿರ್ವಹಣೆಗಾಗಿ ಹಾಗೂ ಕೆರೆಯಲ್ಲಿನ ಪ್ರಾಣಿ, ಪಕ್ಷಿ ಸಂಕುಲಗಳ ನೆಲೆಯ ಸಂರಕ್ಷಣೆಯನ್ನು ಸಿಬ್ಬಂದಿಗಳ ನಿಕಟ ಮೇಲ್ವಿಚಾರಣೆಯಲ್ಲಿ ಕೆರೆಗಳ ಸಂರಕ್ಷಣೆ, ಅಭಿವೃದ್ಧಿ ಮತ್ತು ನಿರ್ವಹಣೆಯನ್ನು ಕೈಗೆತ್ತಿಕೊಳ್ಳತಕ್ಕದ್ದು.

4) ಕೆರೆಯ ಅಭಿವೃದ್ಧಿಯನ್ನು ಕೈಗೆತ್ತಿಕೊಳ್ಳುವ ಮುನ್ನ ವಿವರವಾದ ಯೋಜನಾ ವರದಿಯನ್ನು ಸಿದ್ಧಪಡಿಸುವುದು.

5) ಬೇರೆ ಯಾವುದೇ ಉದ್ದೇಶಗಳಿಗೆ ಬಳಸದಂತೆ ಕಟ್ಟಡ, ರಸ್ತೆ ಇತ್ಯಾದಿಗಳನ್ನು ಕೆರೆ ಅಂಗಳದಲ್ಲಿ ನಿರ್ಮಿಸಕೂಡದು.

6) ಕೆರೆಯ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸುವಾಗ ಕೆರೆಯ ಏರಿ, ತೂಬು, ಕೋಡಿಯ ಮೂಲ ಸ್ವರೂಪಕ್ಕೆ ಧಕ್ಕೆಯಾಗದಂತೆ ವಿನ್ಯಾಸ ಮತ್ತು ಮಾರ್ಪಾಡುಗಳ ಕಾರ್ಯನಿರ್ವಹಿಸುವುದು.

7) ಕೆರೆ ಒತ್ತುವರಿಯಾಗಿದ್ದಲ್ಲಿ ಒತ್ತುವರಿಯನ್ನು ತಡೆಗಟ್ಟಲು, ತೆರವುಗೊಳಿಸಲು ಕ್ರಮವಹಿಸತಕ್ಕದ್ದು ಮತ್ತು ಯಾವುದೇ ತರಹದ ಮಾಲಿನ್ಯ (ಜಲ, ಘನ) ಉಂಟಾಗದಂತೆ ಕ್ರಮ ತೆಗೆದುಕೊಳ್ಳುವುದು.

8) ಅಗತ್ಯವಾದಾಗ ಕೆರೆಯನ್ನು ಹಿಂದಕ್ಕೆ ಪಡೆಯುವ / ಮರು ಹಂಚಿಕೆ ಮಾಡುವ ಹಕ್ಕನ್ನು ಸರ್ಕಾರವು ಹೊಂದಿರುತ್ತದೆ.

9) ಕೊಳಚೆ ನೀರು ಮತ್ತು ಹೊಲಸನ್ನು ಕೆರೆಗಳಿಗೆ ಹರಿಸಬಾರದು. ಅಗತ್ಯ ತಾಂತ್ರಿಕ ಅಭಿಪ್ರಾಯದೊಂದಿಗೆ ನೆಡುತೋಪುಗಳನ್ನು ಕೈಗೆತ್ತಿಕೊಳ್ಳುವುದು.

10) ಈ ಕೆರೆಯಲ್ಲಿ ವಿವಿಧ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸುವಾಗ ಕರ್ನಾಟಕ ಅರಣ್ಯ ಇಲಾಖೆ ಮತ್ತು ಇತರ ಸಂಸ್ಥೆಗಳಿಂದ ಸೃಜಿಸಲ್ಪಟ್ಟಿರುವ ಸ್ವತ್ತುಗಳನ್ನು ಪಟ್ಟಿ ಮಾಡತಕ್ಕದ್ದು ಮತ್ತು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು.

11) ಕೇಂದ್ರ ಸರ್ಕಾರದ ಅರಣ್ಯ ಮತ್ತು ಪರಿಸರ ಇಲಾಖೆ, ಕೇಂದ್ರ ಸರ್ಕಾರ ಇವರ ಆದೇಶ ದಿನಾಂಕ: 04–12–2010 ರಲ್ಲಿ ನಿರ್ದೇಶಿಸಿರುವ ಮಾನದಂಡಗಳನುಸಾರ ಮತ್ತು ಗೌರವಾನ್ವಿತ ನ್ಯಾಯಾಲಯಗಳ ತೀರ್ಪಿನನ್ವಯ ಕೆರೆ ಸಂರಕ್ಷಣೆ / ಅಭಿವೃದ್ಧಿ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**P.R. 8**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ಉಪ ವಿಭಾಗ, ಕಚೇರಿಯನ್ನು ಮಾಗಡಿಯಿಂದ ನೆಲಮಂಗಲ ತಾಲ್ಲೂಕು ಕೇಂದ್ರಕ್ಕೆ ಸ್ಥಳಾಂತರಿಸುವ ಬಗ್ಗೆ– ಆದೇಶ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ ಸಿಶಾ–2/ ಸಿ–22/ 79/ ಸ್ಥಳಾಂತರ/ 2012/ 2531 ದಿನಾಂಕ:09.10.2012.

**ಪ್ರಸ್ತಾವನೆ:**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರು ಮೇಲೆ ಓದಲಾದ ದಿನಾಂಕ:09.10.2012ರ ಪತ್ರದಲ್ಲಿ ಸಣ್ಣ ನೀರಾವರಿ ಉಪ ವಿಭಾಗ, ಮಾಗಡಿ ಇಲ್ಲಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಚೇರಿಯ ಕಾರ್ಯವ್ಯಾಪ್ತಿಯಲ್ಲಿ ದೇವನಹಳ್ಳಿ, ದೊಡ್ಡಬಳ್ಳಾಪುರ, ನೆಲಮಂಗಲ ಮತ್ತು ಮಾಗಡಿ ತಾಲ್ಲೂಕುಗಳ ಕಾರ್ಯಕ್ಷೇತ್ರ ಹೊಂದಿದ್ದು, ಭೌಗೋಳಿಕ ಅಂಶದ ಮೇರೆಗೆ ಮಾಗಡಿ ತಾಲ್ಲೂಕು ಉಳಿದ ಮೂರು ತಾಲ್ಲೂಕುಗಳಿಗೆ ದೂರವಿದ್ದು, ಗುತ್ತಿಗೆದಾರರಿಗೆ, ರೈತರಿಗೆ ಹಾಗೂ ಸಾರ್ವಜನಿಕರಿಗೆ ಕಾರ್ಯನಿಮಿತ್ತ ಉಪ ವಿಭಾಗ ಕಚೇರಿಯನ್ನು ಸಂದರ್ಶಿಸಲು ತೊಂದರೆಯಾಗುತ್ತಿದೆ. ಆದ್ದರಿಂದ ಮಾಗಡಿ ಉಪ ವಿಭಾಗ ಕಚೇರಿಯನ್ನು ನೆಲಮಂಗಲ ಕೇಂದ್ರ ಸ್ಥಾನಕ್ಕೆ ಸ್ಥಳಾಂತರಿಸುವುದು ಸಮಂಜಸವೆಂದು ಕೋರಿರುತ್ತಾರೆ.

ನೆಲಮಂಗಲ ತಾಲ್ಲೂಕು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯೊಳಗೆ ಬರುತ್ತಿದ್ದು, ಮಾಗಡಿ ತಾಲ್ಲೂಕು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಗೆ ಬರದೆ, ರಾಮನಗರ ಜಿಲ್ಲೆಯ ವ್ಯಾಪ್ತಿಗೆ ಬರುತ್ತದೆ. ಜಿಲ್ಲಾ ಪಂಚಾಯತ್ / ಜಿಲ್ಲಾಧಿಕಾರಿಗಳ ಸಭೆಗಳಿಗೆ ಮಾಹಿತಿ ಒದಗಿಸಲು ಕೂಡ ಅನುಕೂಲವಾಗುವುದರಿಂದ ಮಾಗಡಿ ಉಪ ವಿಭಾಗವನ್ನು ನೆಲಮಂಗಲ ತಾಲ್ಲೂಕು ಕೇಂದ್ರಕ್ಕೆ ಸ್ಥಳಾಂತರಿಸಿದಲ್ಲಿ ಆ ಉಪ ವಿಭಾಗದ ವ್ಯಾಪ್ತಿಯಲ್ಲಿನ ಎಲ್ಲಾ ಯೋಜನೆಗಳ ಉಸ್ತುವಾರಿ / ಪರಿವೀಕ್ಷಣೆಗೆ ಅನುಕೂಲವಾಗುವುದಲ್ಲದೆ ಇನ್ನೂ ಹೆಚ್ಚು ನೀರಾವರಿ ಕ್ಷೇತ್ರಗಳನ್ನು ಅಭಿವೃದ್ಧಿಪಡಿಸಿ ಸಾರ್ವಜನಿಕರಿಗೆ ಅನುಕೂಲ ಮಾಡಿಕೊಡಬಹುದೆಂದು ತಿಳಿಸಿರುತ್ತಾರೆ.

ಮುಖ್ಯ ಇಂಜಿನಿಯರ್‌ರವರ ಪ್ರಸ್ತಾವನೆಯ ಹಿನ್ನಲೆ ಹಾಗೂ ಸಣ್ಣ ನೀರಾವರಿ ಉಪ ವಿಭಾಗ, ಮಾಗಡಿಯ ಕಾಮಗಾರಿಗಳು ಮತ್ತು ನೀರಾವರಿ ಕ್ಷೇತ್ರಗಳ ಅಂಕಿ ಅಂಶಗಳನ್ನು ಸರ್ಕಾರವು ಪರಿಶೀಲಿಸಿ, ಸಾರ್ವಜನಿಕ ಹಿತದೃಷ್ಟಿಯಿಂದ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 166 ಸೇಸಎ 2011 ಬೆಂಗಳೂರು ದಿನಾಂಕ:14.12.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ಉಪ ವಿಭಾಗ, ಮಾಗಡಿ ಕಚೇರಿಯನ್ನು ಆಡಳಿತ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕು ಕೇಂದ್ರಕ್ಕೆ ಸ್ಥಳಾಂತರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**P.R. 2286**

## ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಸತ್ಯನಾರಾಯಣ, ರೇಷ್ಮೆ ಪ್ರದರ್ಶಕರು ಇವರ ಅನಧಿಕೃತ ಗೈರುಹಾಜರಿಯನ್ನು ಕರ್ತವ್ಯವಲ್ಲದ ಅವಧಿ (Dies non) ಎಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ:**

1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು
2. ರೇಷ್ಮೆ ಉಪ ನಿರ್ದೇಶಕರು, ಬೆಂಗಳೂರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿಬ್ಬಂದಿ–1(8)/ಪಪೂಅ/85/04–05, ದಿನಾಂಕ: 28–12–2010. ಗ್ರಾಮಾಂತರ ಜಿಲ್ಲಾ ಪಂಚಾಯತ್, ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ/ರೇಉನಿ/ಬೆಂಗ್ರಾಜಿಪ/ಗೈಹಾ/ 10/96–97, ದಿನಾಂಕ: 18–11–1997.
3. ರೇಷ್ಮೆ ವಿಸ್ತರಣಾಧಿಕಾರಿ, ತಾಂತ್ರಿಕ ಸೇವಾ ಕೇಂದ್ರ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್, ಬೂದಿಗೆರೆ ಇವರ ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ/ರೇವಿಅ/ತಾಸೇಕೆ/ಬೂಗೆ/3/97–98, ದಿನಾಂಕ: 3–9–1997 ಹಾಗೂ 20–11–1997.

**ಪ್ರಸ್ತಾವನೆ:**

ಶ್ರೀ ಸತ್ಯನಾರಾಯಣ, ರೇಷ್ಮೆ ಪ್ರದರ್ಶಕರು, ರೇಷ್ಮೆಗೂಡಿನ ಮಾರುಕಟ್ಟೆ, ಶ್ರೀನಿವಾಸಪುರ ಇವರು ದಿನಾಂಕ: 19–3–1983 ರಂದು ಕಾರ್ಯವರದಿ ಮಾಡಿಕೊಂಡಿದ್ದು, ತಮ್ಮ ಸೇವೆಯ ಪರೀಕ್ಷಾರ್ಥ ಅವಧಿಯಲ್ಲಿಯೇ ದಿನಾಂಕ: 27–6–1993 ರಿಂದ 11–7–1996 ರವರೆಗಿನ ನಡುವಿನ ಅವಧಿಯಲ್ಲಿ ಒಟ್ಟು 802 ದಿನಗಳು ಈ ಕೆಳಕಂಡಂತೆ ಕಛೇರಿಯ ಕರ್ತವ್ಯಕ್ಕೆ ಗೈರುಹಾಜರಾಗಿರುತ್ತಾರೆ.

| | | |
|---|---|---|
| 01. | ದಿ: 27–6–1993 ರಿಂದ 5–7–1994 | 374 |
| 02. | ದಿ: 10–5–1995 ರಿಂದ 11–7–1996 | 428 |
| | ಒಟ್ಟು | 802 |

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ನೌಕರರು ದಿನಾಂಕ: 27–6–1993 ರಿಂದ 5–7–1994 ರ ಅನಧಿಕೃತ ಗೈರು ಹಾಜರಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಿರುವುದು ನಿಯಮ ಬಾಹಿರವಾಗಿರುವುದರಿಂದ ನೌಕರರ ಸೇವಾ ಹಿತದೃಷ್ಟಿಯಿಂದ ಸದರಿ ಅವಧಿಯನ್ನು ಕರ್ತವ್ಯವಲ್ಲದ (Dies non) ಅವಧಿಯೆಂದು ಪರಿಗಣಿಸಿ ಆದೇಶಿಸುವಂತೆ ಕೋರಿರುತ್ತಾರೆ. ಹಾಗೂ ದಿ: 19–3–1996 ರಿಂದ 15–5–1997 ರವರೆಗೆ ಪರೀಕ್ಷಾರ್ಥ ಅವಧಿಯನ್ನು ವಿಸ್ತರಿಸಿ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ಮತ್ತು (3)ರ ಆದೇಶಗಳಲ್ಲಿ ರೇಷ್ಮೆ ಇಲಾಖೆಯ ಅಧಿಕಾರಿಗಳು ವಿವಿಧ ರಜೆಗಳನ್ನು ನೌಕರರಿಗೆ ಮಂಜೂರು ಮಾಡಿರುತ್ತಾರೆ.

ಪ್ರಸ್ತುತ ಪ್ರಕರಣದಲ್ಲಿ ಶ್ರೀ ಎಸ್. ಸತ್ಯನಾರಾಯಣ, ರೇಷ್ಮೆ ಪ್ರದರ್ಶಕರು ಇವರು ಪರಿವೀಕ್ಷಣಾ ಅವಧಿಯಲ್ಲಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 114(8) ರನ್ವಯ ತಾತ್ಕಾಲಿಕ ನೌಕರರಾಗಿರುತ್ತಾರೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 117(ಬಿ)ರನ್ವಯ ವಿಶೇಷ ಸನ್ನಿವೇಶಗಳ ದೃಷ್ಟಿಯಿಂದ ಸರ್ಕಾರವು ಅನ್ಯತಾ ನಿರ್ಧರಿಸುವ ಹೊರತು ಖಾಯಂ ಉದ್ಯೋಗ ಅಥವಾ ಅರೆ ಖಾಯಂ ಉದ್ಯೋಗದಲ್ಲಿರುವ ಯಾವುದೇ ಸರ್ಕಾರಿ ನೌಕರನಿಗೆ ಮಂಜೂರು ಮಾಡಬಹುದಾದ ಅಸಾಧಾರಣ ರಜೆಯ ಪರಿಮಿತಿಯನ್ನು ನಿಗದಿಪಡಿಸಲಾಗಿದೆ, ಆದರೆ, ಪ್ರಸ್ತುತ ಪ್ರಕರಣದಲ್ಲಿ ನೌಕರರಿಗೆ ಒಟ್ಟು 802 ದಿನಗಳ ರಜೆಯನ್ನು 3 ಆದೇಶಗಳಲ್ಲಿ ಮಂಜೂರು ಮಾಡಿದ್ದು ನಿಯಮಗಳಲ್ಲಿ ನಿರ್ದಿಷ್ಟಪಡಿಸಿದ ಅವಧಿಯನ್ನು ಮೀರಿ ಇಲಾಖೆಯ ವಿವಿಧ ಅಧಿಕಾರಿಗಳು ರಜೆಯನ್ನು ಮಂಜೂರು ಮಾಡಿರುತ್ತಾರೆ. ನಿಯಮಗಳನ್ನು ಸಡಿಲಿಸಿ ರಜೆ ಮಂಜೂರು ಮಾಡುವ ಅಧಿಕಾರ ಸರ್ಕಾರಕ್ಕೆ ಮಾತ್ರ ಇರುವ ಹಿನ್ನಲೆಯಲ್ಲಿ ತಾತ್ಕಾಲಿಕ ನೌಕರರಾದ ಶ್ರೀ ಎಸ್. ಸತ್ಯನಾರಾಯಣ, ರೇಷ್ಮೆ ಪ್ರದರ್ಶಕರು ಇವರ ಪ್ರಕರಣದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಹಂತದಲ್ಲಿ ಈಗಾಗಲೇ ನಿಯಮ ಬಾಹಿರವಾಗಿ ನೌಕರರ ಅನಧಿಕೃತ ಗೈರು ಹಾಜರಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಿ ಆದೇಶಿಸಿರುವುದು ನಿಯಮಾನುಸಾರವಾಗಿರುವುದಿಲ್ಲ ಮತ್ತು ರಜೆ ಮಂಜೂರು ಮಾಡಲು ಅವರು ಸಕ್ಷಮ ಪ್ರಾಧಿಕಾರವಾಗಿರುವುದಿಲ್ಲವಾದ್ದರಿಂದ ಸದರಿ ರಜಾ ಮಂಜೂರು ಮಾಡಿರುವ ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ನಿಯಮ ಬಾಹಿರವಾಗಿ ಮಂಜೂರು ಮಾಡಿರುವ ಈ ವಿವಿಧ ರಜೆಗಳ ಆದೇಶವನ್ನು ಹಿಂದಕ್ಕೆ ಪಡೆದು ಅವುಗಳನ್ನು ಕರ್ತವ್ಯವಲ್ಲದ ಅವಧಿಯೆಂದು (Dies non) ಪರಿಗಣಿಸಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ: ತೋಇ 66 ರೇಇವಿ 2011, ಬೆಂಗಳೂರು, ದಿನಾಂಕ:11–09–2012.**

ಶ್ರೀ ಎಸ್. ಸತ್ಯನಾರಾಯಣ, ರೇಷ್ಮೆ ಪ್ರದರ್ಶಕರು, ರೇಷ್ಮೆ ಗೂಡಿನ ಮಾರುಕಟ್ಟೆ, ಶ್ರೀನಿವಾಸಪುರ ಇವರಿಗೆ ರೇಷ್ಮೆ ಇಲಾಖೆಯಿಂದ ಈಗಾಗಲೇ 802 ದಿನಗಳ ಅನಧಿಕೃತ ಗೈರು ಹಾಜರಿಗಾಗಿ ಮಂಜೂರು ಮಾಡಿರುವ ವಿವಿಧ ರಜೆ/ವೇತನ ರಹಿತ ರಜೆಗಳ ಕುರಿತಂತೆ ಹೊರಡಿಸಿರುವ ರೇಷ್ಮೆ ಉಪ ನಿರ್ದೇಶಕರು, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್, ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ/ರೇಉನಿ/ಬೆಂಗ್ರಾಜಿಪ/ಗೈಹಾ/ 10/96–97, ದಿನಾಂಕ: 18–11–1997 ಹಾಗೂ ರೇಷ್ಮೆ ವಿಸ್ತರಣಾಧಿಕಾರಿ, ತಾಂತ್ರಿಕ ಸೇವಾ ಕೇಂದ್ರ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್, ಬೂದಿಗೆರೆ ಇವರ ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ/ರೇವಿಅ/ತಾಸೇಕೆ/ಬೂಗೆ/3/97–98, ದಿನಾಂಕ: 3–9–1997 ಹಾಗೂ 20–11–1997 ಗಳನ್ನು ಹಿಂದೆಕ್ಕೆ ಪಡೆಯಲಾಗಿದೆ. ಹಾಗೂ ನೌಕರರ ದಿನಾಂಕ: 27–6–1993 ರಿಂದ 5–7–1994 ರವೆಗಿನ 374 ದಿನಗಳು ಹಾಗೂ ದಿನಾಂಕ: 10–5–1995 ರಿಂದ 11–7–1996 ರವರೆಗಿನ 428 ಹೀಗೆ ಒಟ್ಟು 802 ದಿನಗಳ ಗೈರುಹಾಜರಿಯ ಕರ್ತವ್ಯವಲ್ಲದ ಅವಧಿ (DIES NON) ಎಂದು ಪರಿಗಣಿಸಿದೆ.

ಈ ಆದೇಶವನ್ನು ಅರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/478/ಸೇ–1/2011, ದಿನಾಂಕ: 12–4–2011 ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–7–1996 ರಲ್ಲಿ ಪ್ರಧಾನ ಕಾರ್ಯದರ್ಶಿರವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಚಂದ್ರಶೇಖರ್**

**P.R. 2258** ಪೀಠಾಧಿಕಾರಿ,

ತೋಟಗಾರಿಕೆ ಇಲಾಖೆ(ರೇಷ್ಮೆ)

## ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಡಿ. ಶಿವರಾಜು, ರೇಷ್ಮೆ ಪ್ರವರ್ತಕರು, ರೇಷ್ಮೆ ಕೃಷಿ ಕ್ಷೇತ್ರ ಬೆಂಗಳೂರು ಇವರ ಪರಿವೀಕ್ಷಣಾ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**

1. ಅಧಿಕೃತ ಜ್ಞಾಪನ ಸಂಖ್ಯೆ: ಸಿ1(5)/ರೇಪ್ರವ/ಪಪೂಅ/10/2008–09, ದಿನಾಂಕ: 15–06–2012.
2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿ1(5)/ರೇಪ್ರವ/ಪಅವಿ/56 /2007–08, ದಿನಾಂಕ: 15–06–2012.

**ಪ್ರಸ್ತಾವನೆ:**

ಶ್ರೀ ಡಿ. ಶಿವರಾಜು, ರೇಷ್ಮೆ ಪ್ರವರ್ತಕರು, ರೇಷ್ಮೆ ಕೃಷಿ ಕ್ಷೇತ್ರ, ಹೊಸಿಗೆಕಾವಲ್ ಇವರು ಅನುಕಂಪದ ಆಧಾರದ ಮೇಲೆ ರೇಷ್ಮೆ ಪ್ರವರ್ತಕರ ಹುದ್ದೆಗೆ ನೇಮಕಗೊಂಡು ದಿನಾಂಕ: 07–02–2004 ರಂದು ಕಾರ್ಯವರದಿ ಮಾಡಿಕೊಂಡಿರುತ್ತಾರೆ. ಇವರು ಕಾರ್ಯವರದಿ ಮಾಡಿಕೊಂಡ ದಿನಾಂಕದಿಂದ ಎರಡು ವರ್ಷ ಪರೀಕ್ಷಾರ್ಥ ಅವಧಿಯಲ್ಲಿದ್ದು, ಈ ಅವಧಿಯಲ್ಲಿ ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ನಿಗದಿತ ಅವಧಿಯಲ್ಲಿ ಪಾಸು ಮಾಡಿಕೊಳ್ಳದೇ ಪರೀಕ್ಷೆಯನ್ನು ದಿನಾಂಕ: 02–08–2007 ರಂದು ಪಾಸು ಮಾಡಿಕೊಂಡಿರುತ್ತಾರೆ. ಈ ಅವಧಿಯಲ್ಲಿ ನೌಕರರು 96 ದಿನಗಳು ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತಾರೆ. ಈ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 106ಎ ರೀತ್ಯಾ ವೇತನ ರಹಿತ ರಜೆಯನ್ನಾಗಿ ಪರಿಗಣಿಸಿ ಆದೇಶಿಸಲಾಗಿದೆ. ನೇಮಕಾತಿ ಪ್ರಾಧಿಕಾರವಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ನೌಕರರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 4(1)(ii) ರನ್ವಯ ಒಂದು ವರ್ಷದ ಅವಧಿಗೆ ಅಂದರೆ ದಿನಾಂಕ: 07–02–2006 ರಿಂದ 06–02–2007 ರವರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಆದೇಶದಲ್ಲಿ ವಿಸ್ತರಿಸಿ ಆದೇಶಿಸಿದ್ದು, ಉಳಿದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 4(1)(i) ರನ್ವಯ ದಿನಾಂಕ: 07–02–2007 ರಿಂದ 02–08–2007ರವರೆಗೆ ಹಾಗೂ ನೌಕರರು ಗೈರು ಹಾಜರಾದ ಅವಧಿ ದಿನಾಂಕ: 03–08–2007 ರಿಂದ 06–11–2007 ರವರೆಗೆ 96 ದಿನಗಳನ್ನು ಮುಂದೂಡಿ, ಪರೀಕ್ಷಾರ್ಥ ಅವದಿಯನ್ನು ದಿನಾಂಕ: 07–11–2007 ರವರೆಗೆ ವಿಸ್ತರಿಸಿ, ಆದೇಶಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ರೇಷ್ಮೆ ಕೃಷಿ ಅಬಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

ರೇಷ್ಮೆ ಆಯುಕ್ತರ ಕೋರಿಕೆಯಂತೆ ನೌಕರರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ವಿಷಯವನ್ನು ಸರ್ಕಾರವು ಪರಿಶೀಲಿಸಿದ್ದು, 2006–07ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿನ ಪ್ರತಿಕೂಲ ಷರಾ ದಾಖಲಾಗಿರುವುದನ್ನು ಮನ್ನಿಸಿರುವುದರಿಂದ ಉಳಿದ ಸಾಲಿನ ನೌಕರರ ಕಾರ್ಯನಿರ್ವಹಣಾ ವರದಿಯು ತೃಪ್ತಿಕರವಾಗಿದ್ದು, ನೌಕರರು ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸುಮಾಡಿಕೊಂಡಿರುವುದರಿಂದ ಅವರ ಪರಿವೀಕ್ಷಣಾ ಅವಧಿಯನ್ನು ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ಅವರು ಪಾಸು ಮಾಡಿದ ದಿನಾಂಕದವರೆಗೆ ವಿಸ್ತರಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ತೋಇ 167 ರೇಇವಿ 2012, ಬೆಂಗಳೂರು, ದಿ: 09–11–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಡಿ. ಶಿವರಾಜು, ರೇಷ್ಮೆ ಪ್ರವರ್ತಕರು, ರೇಷ್ಮೆ ಕೃಷಿ ಕ್ಷೇತ್ರ, ಹೊಸಿಗೆಕಾವಲ್ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 4(1)(i) ರನ್ವಯ ದಿನಾಂಕ: 07–02–2007 ರಿಂದ 02–08–2007ರವರೆಗೆ ಹಾಗೂ ನೌಕರರು ಗೈರು ಹಾಜರಾದ ಅವಧಿ ದಿನಾಂಕ: 03–08–2007 ರಿಂದ 06–11–2007 ರವರೆಗಿನ 96 ದಿನಗಳನ್ನು ಮುಂದೂಡಿ, ದಿನಾಂಕ: 07–11–2007 ರವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 10 ರನ್ವಯ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದ ಅವಧಿಗೆ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಅದನ್ನು ಘೋಷಿಸಿದ ನಂತರ ಕಾಲ್ಪನಿಕವಾಗಿ (Notionally) ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸಬಹುದು. ಆದರೆ, ವೇತನ ಬಾಕಿಯನ್ನು ನೀಡುವಂತಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಚಂದ್ರಶೇಖರ್**

ಪೀಠಾಧಿಕಾರಿ,

ತೋಟಗಾರಿಕೆ ಇಲಾಖೆ(ರೇಷ್ಮೆ)

**P.R. 2198**

**EDUCATION SECRETARIAT**

**Sub:-** Participation of Engineering Institutions under Sub-Components 1.1 and 1.2 of the Technical Education Quality Improvement Programme- Phase-II (TEQIP-II)

Read:- 1. Letter No.NPIU/TEQIP-II/MoU-Sign/States/141 dt.15.4.2011

2. Letter No.ED 326 TPE 2011 dt. 21.4.2011

3 Letter No.NPIU/TEQIP/-II/MoU/States/978 dt.20.7.2011

4 MoUs dt.24.6.2011, 23.7.2011 and 9.1.2012 between the Government and 19 participating institutions under TEQIP-II.

5 G.O.No.ED 326 TPE 2010 dt.25.6.2011, 29.9.2011, 3.1.2012 and 13.1.2012

6 .D.O.letter No.16-21/2011-TS.VII dt.12.7.2012 from Secretary, MHRD

**Preamble:**

Government of India, under the National Policy on Education, with the financial assistance from the World Bank had launched the Technical Educational Quality Improvement Programme (TEQIP) during 2002-03 for a systematic transformation of the Technical System. The first phase of TEQIP had commenced during 2003 and ended in 2009. Government of Karnataka which participated in the first phase of TEQIP had outperformed the national average and successfully implemented the programme covering 14 engineering colleges including 7 Government aided institutions, 2 University Engineering Colleges and 5 private unaided institutions. The funding pattern under 1st phase was in the ratio of 80:20 borne by the Central Government and the State Government respectively. The project cost released to private engineering colleges was in the form of financial grant and loan in the ratio of 24 % and 76% respectively. The repayment of loan by the private institutions shall be spread over a period of 15 years after completion of moratorium period of five years. In respect of 7 government-aided institutions under TEQIP-I, there would be reduction of grant-in-aid from 85% to 50% over a period of 15 years after the completion of moratorium period of five years, i.e. reduction of 2.5% grant every year for a period of 15 years. Accordingly, MoUs were entered into between the Government and the beneficiary institutions during 2005 regarding participation and implementation of the project.

2. To continue the development activities initiated through TEQIP-I, the Ministry of Human Resource Development (MHRD), as a 'Centrally Sponsored Scheme' with part matching contribution from the State Governments has planned a sequel project as TEQIP-II commencing from 2010 for a period of 4 years. TEQIP-II project aims at scaling up and supporting ongoing efforts to improve quality of Technical Education and enhance the existing capacities of the Institutions to become dynamic, demand driven quality conscious, efficient and forward looking, responsive to rapid economic and technological development occurring both at National and International levels as per the Project Implementation Plan (PIP).

3. In the letter read at (1) above, National Project Implementation Unit (NPIU), MHRD has considered the willingness of the State Government to participate in the TEQIP-II, and requested to sign MoU. In the letter read at (2) above, the State Government has sent the MoU duly signed to MHRD which has signed the same on 13.5.2011 and returned vide letter read at (3) above. Subsequently, vide Sl.No.(4) read above, Government orders have been issued for participation of 19 engineering institutions, which have been approved by the National Steering Committee under Sub-components 1.1 and 1.2 of TEQIP-II as per the norms of MHRD, and to sign MoUs. In Sl.Nos. read at (5) above, necessary government orders have been issued for fulfillment of obligatory requirements by the beneficiary institutions for release of central funds as per MHRD norms.

4. MHRD vide its communication read at Sl.No.(6) above, has informed that the Grant for private unaided institutions under sub-component 1.2 of TEQIP-II is only Rs.4 crores each which is to be shared between Government of India and the State Government in the ratio of 75:25.

5. The total project cost and allocation under TEQIP-II would be as under:

(Rs.in crores)

| Sl. No | Compo-nent | No.of Institutions selected | Allocation | | | Total Cost | Central Share @ 75% for Govt./Aided under sub-comp. 1.2 & 60% for Pvt. Instn. under Sub-Comp.1.1 | State share @ 25% for Govt./Aided under Sub-comp. 1.2 & 20% for Pvt. Instn. under Sub-comp.1.1 | Pvt. Institute share @ 20% under sub-comp.1.1 |
|---|---|---|---|---|---|---|---|---|---|
| | | Govt./ Aided | Private | Govt./ Aided | Pvt. | | | | |
| 1 | 1.1 | 3 | - | 10 | - | 30.00 | 22.50 | 7.50 | |
| | | | 1 | | 4 | 4.00 | 2.40 | 0.80 | 0.80 |
| 2 | 1.2 | 8 | | 12.50 | - | 100.00 | 75.00 | 25.00 | - |
| | | | 7 | | 4.00 | 28.00 | 21.00 | 7.00 | - |
| | **Total** | **11** | **8** | | | **162.00** | **120.90** | **40.30** | **0.80** |

6. The funding pattern of the total project cost will be as detailed below:

***(a)*** **For Sub-Component 1.1 of TEQIP-II:**

project cost of will be shared by Government of India and the State Government in the ratio of 75:25 respectively for Government and Aided Institutions and in respect of Private Institutions the project cost will be borne by Government of India, State and the Private Institution in the ratio of 60:20:20 respectively.

**Participating Institutions**:

**Government**: 1. Sri Krishnarajendra Silver Jubilee Technological Institute, Bangalore

**Govt. Aided:** 1. BVB College of Engineering & Technology, Hubli

2. PES College of Engineering, Mandya

**Private:** 1. Nitte Meenakshi Institute of Technology, Bangalore

**(b) For Sub-Component 1.2 of TEQIP-II:**

The project cost will be shared by Government of India and the State Government in the ratio of 75:25 for all institutions (Govt./Aided/Private Unaided)

**Participating Institutions:**

**Government**: 1.University Visveshwaraya College of Engineering, Bangalore

**Govt. Aided**: 1. Sri Jayachamarajendra College of Engineering, Mysore

*2.* Malnad College of Engineering, Hassan

*3.* BMS College of Engineering, Bangalore

*4.* The National Institute of Engineering, Mysore

*5.* Basaveshwara Engineering College, Bagalkot

*6.* HKE's Poojya Doddappa Appa College of Engineering, Gulbarga

*7.* Dr.Ambedkar Institute of Technology, Bangalore

**Private :** 1. M.S. Ramaiah Institute of Technology, Bangalore

*2.* NMAM Institute of Technology, Nitte

*3.* Sri Siddhartha Institute of Technology, Tumkur

*4.* Siddaganga Institute of Technology, Tumkur

*5.* R.V.College of Engineering, Bangalore

*6.* PES Institute of Technology, Bangalore

*7.* S.D.M.College of Engineering and Technology, Dharwar

7. Government has examined all the above aspects. Hence the order.

**GOVERNMENT ORDER NO.ED 4 TPE 2012, DATED 31st JULY 2012**

In the circumstances explained above, Government are pleased to accord approval for participation of the above 19 engineering institutions under TEQIP-II at a total project cost of Rs.162 crores to be funded as per the funding pattern indicated in the Table at para 5 and at para 6 above as per MHRD norms.

2. The State Project Advisor, SPFU(TEQIP), Directorate of Technical Education, Bangalore, shall oversee and monitor implementation of TEQIP-II as per MHRD norms.

3. All the participating institutions shall abide by the conditions envisaged under MHRD norms.

4. The expenditure under TEQIP-II will be met under Head of Account "2203-00-800-0-15 (Plan)" towards implementation of TEQIP-II. Separate orders for release of funds will be issued.

5. The conditions stipulated under TEQIP-I in respect of the financial assistance to 5 private institutions in part grant (24%) and part loan (76%) and in respect of reduction of grant-in-aid at the rate of 2.5% p.a. from 85% to 50% over a period of 15 years for 7 Aided Institutions will remain unchanged.

6. This order issues with the concurrence of the Finance Department vide its Note No.FD 761 EXP-8/2012 dated 26.7.2012.

By order and in the name of the Governor of Karnataka

**B.N.JAGADEESH**

Under Secretary to Government

Education Department

(Technical Education)

**P.R. 2043**

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆ ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಪತ್ರ ಸಂಖ್ಯೆ: ಲಾ 409 ಎಲ್‌ಸಿಎಲ್ 2011 ದಿನಾಂಕ: 08/02/2012.

2. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಇವರ ಪತ್ರ ಸಂಖ್ಯೆ: ಆಡಳಿತ /1313/2012, ದಿನಾಂಕ: 28/02/2012.

3. ಜಿಲ್ಲಾಧಿಕಾರಿಗಳ ಕಛೇರಿ ಪತ್ರ ಸಂಖ್ಯೆ: ಕಂಶಾ/ಲಾ/ಸಿಆರ್–321/12–13, ದಿನಾಂಕ: 16/08/2012.

**ಪ್ರಸ್ತಾವನೆ:**

ಮುಧೋಳ ತಾಲ್ಲೂಕಿನಲ್ಲಿ ಸುಮಾರು 3 ಲಕ್ಷಕ್ಕಿಂತಲೂ ಹೆಚ್ಚಿನ ಜನಸಂಖ್ಯೆ ಇದ್ದು ಎಂಭತ್ತು ಹಳ್ಳಿಗಳನ್ನು ಹಾಗೂ ಮಹಾಲಿಂಗಪುರ ಮತ್ತು ಲೋಕಾಪುರ ಎಂಬ ದೊಡ್ಡ ಪಟ್ಟಣಗಳನ್ನು ಹೊಂದಿದ್ದು, ಮುಧೋಳ ತಾಲ್ಲೂಕು ಸಂಪೂರ್ಣವಾಗಿ ನೀರಾವರಿ ಹೊಂದಿದ್ದು, ಹೆಚ್ಚು ಅಭಿವೃದ್ಧಿ ಹೊಂದುತ್ತಿರುವ ತಾಲ್ಲೂಕು ಆಗಿರುವುದರಿಂದ, ಒಂದು ನೋಟರಿ ಹುದ್ದೆಯನ್ನು ಸೃಜಿಸುವಂತೆ ಕೋರಿ ಸರ್ಕಾರದಲ್ಲಿ ಮನವಿಗಳನ್ನು ಸ್ವೀಕರಿಸಲಾಗಿದೆ.

ಅದರಂತೆ ಮೇಲೆ ಓದಲಾದ (1)ರ ದಿನಾಂಕ: 08/02/2012ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಮತ್ತು ಜಿಲ್ಲಾಧಿಕಾರಿಗಳು, ಬಾಗಲಕೋಟೆ ಇವರನ್ನು ಮುಧೋಳ ತಾಲ್ಲೂಕಿಗೆ ಹೊಸ ನೋಟರಿ ಹುದ್ದೆ ಸೃಜಿಸುವ ಅವಶ್ಯಕತೆ ಇದೆಯೇ? ಎಂಬ ಬಗ್ಗೆ ಅಭಿಪ್ರಾಯ ಕೋರಲಾಗಿದ್ದು, ಅದರಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 28/02/2012ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಜಿಲ್ಲೆ ಇವರು ಮುಧೋಳ ಕಂದಾಯ ತಾಲ್ಲೂಕಿನಲ್ಲಿ ರಾಜ್ಯ ಸರ್ಕಾರದಿಂದ 4 ನೋಟರಿಗಳು ನೇಮಕಗೊಂಡಿದ್ದು, ಕೇಂದ್ರ ಸರ್ಕಾರದಿಂದ ಯಾವುದೇ ನೋಟರಿಗಳು ನೇಮಕಗೊಂಡಿಲ್ಲವೆಂದು, ಒಂದು ಹೆಚ್ಚುವರಿ ನೋಟರಿ ಹುದ್ದೆ ಸೃಜಿಸಬಹುದೆಂದು ಅಭಿಪ್ರಾಯಪಟ್ಟಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ: 16/08/2012ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರು ಹಿರಿಯ ಮತ್ತು ಕಿರಿಯ ಶ್ರೇಣಿಯ ನ್ಯಾಯಾಲಯಗಳಲ್ಲಿ ಇರುವ 4 ಜನ ನೋಟರಿಗಳು ಕೆಲಸ ನಿರ್ವಹಿಸುತ್ತಿರುವುದರಿಂದ, ಅವರಿಗೆ ಕೆಲಸದ ಒತ್ತಡವಿದ್ದು, ಮುಧೋಳ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ಹುದ್ದೆ ಸೃಜಿಸುವಂತೆ ಕೋರಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 409 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ: 05/12/2012.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಬಾಗಲಕೋಟೆ ಜಿಲ್ಲೆಯ ಮುಧೋಳ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ ಒಂದು ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುಕ್ಮಿಣಿ ದಿವಾಕರ್**

ಸರ್ಕಾರದ ಅಧೀನ ಕಾರ್ಯದರ್ಶಿಗಳು (ಆಡಳಿತ–2)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**PR.2242**